# ಸಿದ್ಧಗಂಗಾ

ಸಂಪುಟ-29. ಸಂಚಿಕೆ-12. ಡಿಸೆಂಬರ್-1993.

## ಶ್ರೀ ಸಿದ್ಧಗಂಗಾ ಗುರುಕರುಣ ತ್ರಿವಿಧಿ

ವಿನಯ ವಿವೇಕಗಳ ಜಯ ಶಿವಸಾಕಾರವೆ
ಮಾನವ್ಯದ ಮಹತಿಯ ಮಂಗಳವೆ। ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು॥

§ § §

ಆಲ ಬೇಲಗಳಾದೆ ಮಾವು ಮಲ್ಲಿಗೆಯಾದೆ
ಶ್ರೀ ಬಿಲ್ವತರುವಾಗಿ ಜಗಪೊರೆದೆ। ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು॥

§ § §

ತಾಳೆ ತೆಂಗುಗಳಾದೆ ಬಾಳೆ ಬನ್ನಿಗಳಾದೆ
ತೇಗ ಹೊನ್ನೆಗಳಾಗಿ ನೆರಳಾದೆ। ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು॥

—ಶ್ರೀ ಹೆಚ್. ವಿ. ವೀರಭದ್ರಯ್ಯ.

| ಲೇಖನ | ಲೇಖಕರು | ಪುಟ |
|---|---|---|
| * ಶ್ರೀವಾಣಿ | | 5 |
| * ಶ್ರೀ ಸಿದ್ಧಲಿಂಗೇಶ್ವರ ವಚನ | | 7 |
| * ಸಂಪಾದಕೀಯ | | 9 |
| ನಮ್ಮ ಶಿಕ್ಷಣ ಕ್ಷೇತ್ರ ಕುರುಕ್ಷೇತ್ರವಾಗಿದೆಯೆ? | —ಕೆ.ಆರ್. ಉಡುಪ | 11 |
| * ಬದಲಾಗುತ್ತಿರುವ ಮೌಲ್ಯಗಳು | —ಗೋಪಾಲ ಆಶ್ರಿತ | 20 |
| * ತನ್ನಂತೆ ಪರರು ಪರರಂತೆ ತಾನು | —ಡಾ॥ ಸಂಜೀವಶೆಟ್ಟಿ | 26 |
| *ಬಸವ ತತ್ತ್ವ ರತ್ನಾಕರ–22 | —ಮೋಟಗಿ ಮಲ್ಲಿಕಾರ್ಜುನ | 29 |
| * ಕಬ್ಬಿಣದಿಂದ ಬಂಗಾರ | —ಸುಬ್ರಾಯ ಅಡಿಗ | 33 |
| * ಯಾರೂ ಕೊಳ್ಳದ ದೌರ್ಭಾಗ್ಯದ ವಜ್ರ | —ಪ. ರಾಮಕೃಷ್ಣ ಶಾಸ್ತ್ರಿ | 37 |
| * ನಾವಾಡುವ ಮಾತು ಹೇಗಿರಬೇಕು? | —ಎಚ್. ಗವಿಸಿದ್ದಯ | 40 |
| * ಹಾಸ್ಯ | —ಜಿ. ಕೃಷ್ಣರಾವ್ | 43 |



# ಶ್ರೀವಾಣಿ

## Great Man

ಲಾಲ್ ಬಹಾದ್ದೂರ್ ಶಾಸ್ತ್ರಿಯವರು ರಾಷ್ಟ್ರದ ಪ್ರಥಮ ಮಂತ್ರಿಗಳಾಗಿದ್ದುದನ್ನು ನೀವೆಲ್ಲ ಬಲ್ಲವರಾಗಿದ್ದೀರಿ. ಸರಳ ಜೀವನ ಉನ್ನತ ಚಿಂತನಕ್ಕೆ ಹೆಸರಾಗಿದ್ದವರು ಅವರು. ಅವರ ಬಗ್ಗೆ ಹಲವಾರು ಮಾತುಗಳನ್ನು ಹೇಳುತ್ತಾರೆ. ಅಂತಹ ಮಾತು ಗಳಲ್ಲಿ ಒಂದನ್ನು ಪ್ರಸ್ತಾಪಿಸಲು ಸಂತೋಷವಾಗುತ್ತದೆ ಲಾಲ್ ಬಹಾದ್ದೂರರು ರಾಜಕಾರಣಕ್ಕೆ ಬರುವುದಕ್ಕೆ ಮೊದಲು ಸರ್ಕಾರಿಸೇವೆಯಲ್ಲಿ ಸಾಮಾನ್ಯ ನೌಕರ ರಾಗಿ ಕೆಲಸ ಮಾಡುತ್ತಿದ್ದರು. ಆಗ ಅವರಿಗೆ ಬರುತ್ತಿದ್ದ ಸಂಬಳ ತಿಂಗಳಿಗೆ ಕೇವಲ ಐವತ್ತು ರೂಪಾಯಿಗಳು ಮಾತ್ರ- ಅಷ್ಟರಲ್ಲಿಯೇ ತೃಪ್ತಿ ಜೀವನವನ್ನು ನಡೆಸು ತ್ತಿದ್ದರು. ಅವರ ಧರ್ಮಪತ್ನಿಗಳಾದ ಶ್ರೀಮತಿ ಲಲಿತಾ ಶಾಸ್ತ್ರಿಯವರೂ ಸಹ ಪತಿಯ ಇಷ್ಟಕ್ಕನು ಕೂಲವಾಗಿ ನಡೆದುಕೊಳ್ಳುತ್ತಿದ್ದ ಸಾಧ್ವಿ. ಒಮ್ಮೆ ಯಾರೋ ಒಬ್ಬ ಬಡ ಮನುಷ್ಯ ತುಂಬ ಸಂಕಟಕ್ಕೊಳಗಾಗಿ ಶಾಸ್ತ್ರಿಗಳ ಬಳಿಗೆ ಬಂದು ತನಗೆ ನಲವತ್ತು ರೂಪಾಯಿಗಳನ್ನು ಕೊಡುವಂತೆ ಬೇಡಿದ. ಶಾಸ್ತ್ರಿಗಳದು ಪ್ರಾಮಾಣಿಕ ಮನಸ್ಸು ಕೊಡಬೇಕೆಂಬ ತುಡಿತ, ಆದರೆ ಕೈಯ್ಯಲ್ಲಿ ಒಂದು ಪೈಸೆಯೂ ಇಲ್ಲ. ಬಂದಾತನ ಮುಂದೆ ನಿರ್ವಂಚನೆಯಿಂದ ತಮ್ಮ ಸ್ಥಿತಿಯನ್ನು ತೋಡಿಕೊಂಡರು. ಬಡವನ ಸ್ಥಿತಿ ಕರುಣಾಜನಕವಾಗಿತ್ತು. ಏನೂ ಮಾಡುವಂತಿಲ್ಲ ತಮ್ಮ ಕೈಹಿಸುಕಿ ಕೊಂಡು ಶಾಸ್ತ್ರಿಗಳು ನರಳುತ್ತ ನಿಂತುಬಿಟ್ಟರು. ಅಷ್ಟರಲ್ಲಿ ಲಲಿತಾ ಶಾಸ್ತ್ರಿಯವರು ಪ್ರಸಂಗವನ್ನೆಲ್ಲಾ ಮನವರಿಕೆ ಮಾಡಿಕೊಂಡು ತಮ್ಮ ಬಳಿಯಿದ್ದ ನಲವತ್ತು ರೂಗಳನ್ನು ಶಾಸ್ತ್ರಿಯವರಿಗೆ ಕೊಟ್ಟು ಬಡವನಿಗೆ ಕೊಡುವಂತೆ ವಿನಂತಿಸಿಕೊಂಡರು. ಬಂದಾತ ಹಣ ಪಡೆದು ಕೃತಜ್ಞತೆ ಸೂಚಿಸಿಹೊರಟು ಹೋದ. ಶಾಸ್ತ್ರಿಗಳು ತಮ್ಮ ಪತ್ನಿಯತ್ತ ತಿರುಗಿ "ಹಣ ಎಲ್ಲಿಂದ ಬಂತು ?" ಎಂದು ಕೇಳಿದರು. ಲಲಿತಾಶಾಸ್ತ್ರಿಯವರು ಮನೆ ಖರ್ಚಿಗೆಂದು ಕೊಡುತ್ತಿದ್ದ ಐವತ್ತು ರೂಗಳಲ್ಲಿ ನಾಲ್ಕು ತಿಂಗಳಿಂದ ಉಳಿಸಿದ್ದ ಹಣ ನಲವತ್ತು ರೂಪಾಯಿಗಳೆಂದು ಹೇಳಿದರು. ತಕ್ಷಣವೇ ಒಳಗೆ ಹೋಗಿ ಪೆನ್ನು, ಪೇಪರ್ ತೆಗೆದುಕೊಂಡು ಶಾಸ್ತ್ರಿಯವರು ಸರ್ಕಾರಕ್ಕೆ ಪತ್ರ ಬರೆದು ತಮಗೆ ಇನ್ನು ಮುಂದೆ ತಿಂಗಳಿಗೆ ಕೇವಲ ನಲವತ್ತು ರೂಪಾಯಿ ಸಂಬಳ ಸಾಕು ಎಂದು ತಿಳಿಸಿದರು.

ಇಂದು ಲಾಲ್ ಬಹಾದ್ದೂರ್ ಶಾಸ್ತ್ರಿಗಳನ್ನು ರಾಷ್ಟ್ರ ಎಷ್ಟು ಸ್ಮರಿಸಿಕೊಳ್ಳುತ್ತಿದೆ ಚಿಂತಿಸಬೇಕಾಗಿದೆ. ನಡೆ-ನುಡಿಗಳಲ್ಲಿ ರಾಷ್ಟ್ರಕ್ಕಾಗಿ ಬದುಕಿದವರು ಶಾಸ್ತ್ರಿಗಳು **Great Man.**

(ಪಿರಿಯಾಪಟ್ಟಣ ತಾ||, ರಾವಂದೂರಿನಲ್ಲಿ ಬಸವಜಯಂತಿ ಸಂದರ್ಭದಲ್ಲಿ ನೀಡಿದ ಆಶೀರ್ವಚನದಿಂದ ಸಂಗ್ರಹ)

# ಶ್ರೀ ಸಿದ್ಧಲಿಂಗೇಶ್ವರ ವಚನ



ಜ್ಯೋತಿಯಿದ್ದ ಮನೆಯಲ್ಲಿ ಕತ್ತಲೆಯುಂಟೆ ?
ಲಿಂಗವಿದ್ದಂಗದಲ್ಲಿ ಅಜ್ಞಾನವುಂಟೆ ?
ಅಜ್ಞಾನವಿಲ್ಲವಾಗಿ
ಹೆಂಗಳಿಗೆ ಸೋಲರು, ಹೊಂಗಳಿಗೆಣಿಸರು
ಮಹಾಲಿಂಗೈಕ್ಯರಯ್ಯ ನಿಮ್ಮ ಪ್ರಮಥರು।
ಮಹಾಲಿಂಗ ಗುರು ಶಿವ ಸಿದ್ಧೇಶ್ವರ ಪ್ರಭುವೇ ।

ದೀವಿಗೆಯನ್ನು ಹಚ್ಚಿದ ಮನೆಯಲ್ಲಿ ಕತ್ತಲೆವಾಸಮಾಡಲು ಸಾಧ್ಯವೆ? ಅದರಂತೆಯೇ ಲಿಂಗವಿದ್ದ ಅಂಗದಲ್ಲಿ ಅಜ್ಞಾನವೆಂಬುದು ಇರಲಾರದು. ಎಲ್ಲವಿಕಾರಗಳಿಗೂ ಮೂಲವಾಗಿದ್ದ ಅಜ್ಞಾನವೇ ನಷ್ಟವಾಗಿ ಹೋದಮೇಲೆ ಅಂಗವು ಇರಲಾರದು. ಅಂಗವಿಕಾರವಿಲ್ಲದಿದ್ದರೆ ಹೊನ್ನು ಹೆಣ್ಣು ಮಣ್ಣುಗಳಿಗೆ ಸೋಲುವ ಪ್ರಸಂಗವೇ ಇರುವುದಿಲ್ಲ. ಅಂತೆಯೇ ಜ್ಞಾನಿಗಳಾದ ಪ್ರಮಥರು ಹೊನ್ನು ಹೆಣ್ಣು ಮಣ್ಣುಗಳ ಆಶೆಯನ್ನು ತೊರೆದು ಯಾವಾಗಲು ಲಿಂಗಾನಂದದ ನಿಚ್ಚೆರಗಿನಲ್ಲಿಯೇ ತಮ್ಮ ಆಯುಷ್ಯವನ್ನು ಯಾಪನ (ಕಳೆಯೋಣ) ಮಾಡಿರುವರು.

**ಸಿದ್ಧಗಂಗಾ ಮಾಸ ಪತ್ರಿಕೆ**
**ಶ್ರೀ ಸಿದ್ಧಗಂಗಾ ಮಠ - 572 104**
ತುಮಕೂರು ಜಿಲ್ಲೆ




**ಚಂದಾ ವಿವರ**

ವಾರ್ಷಿಕ ಚಂದಾ 30-00ರೂ
ಆಜೀವ ಸದಸ್ಯತ್ವ 350-00

## ಲೇಖಕರಲ್ಲಿ ಮನವಿ

ಸಿದ್ಧಗಂಗಾ ಶ್ರೀ ಸಿದ್ದಗಂಗಾ ಮಠದಿಂದ ಪ್ರಕಟವಾಗುತ್ತಿರುವ ಮಾಸ ಪತ್ರಿಕೆ. ಶ್ರೀ ಮಠದ ಹಳೆಯ ವಿದ್ಯಾರ್ಥಿ ಸಂಘದ ಹೆಮ್ಮೆಯ ಸೇವಾ ಪುರವಣಿ. ಮೇಲಾಗಿ ಶ್ರೀ ಮಠದ ಮುಖವಾಣಿ ಪೂಜ್ಯ ಶ್ರೀ ಶ್ರೀ ಡಾ|| ಶಿವಕುಮಾರ ಮಹಾಸ್ವಾಮಿಗಳವರ ದಿವ್ಯ ಮಾರ್ಗದರ್ಶನದಲ್ಲಿ ಮುನ್ನಡೆದಿರುವ ಪತ್ರಿಕೆ. ತ್ರಿವಿಧ ದಾಸೋಹ ಸೇವಾ ತತ್ಪರತೆಯಿಂದ ಹೆಜ್ಜೆ ಹಾಕುತ್ತಿದೆ. ಈ ಧ್ಯೇಯ ಸಾಧನೆಗಾಗಿ ನಾಡಿನ ಗಣ್ಯ ಲೇಖಕರಿಂದ ಸಾಹಿತ್ಯ, ಸಂಸ್ಕೃತಿ, ಧರ್ಮ, ವಿಜ್ಞಾನ, ಶಿಕ್ಷಣ. ಇತಿಹಾಸ, ವೈಚಾರಿಕ, ಚಿಂತನ ಮುಂತಾದ ಲೇಖನಗಳನ್ನು ಸ್ವಾಗತಿಸುತ್ತದೆ. ಅಸ್ವೀಕೃತ ಲೇಖನಗಳನ್ನು ಪಡೆಯಲು ಸಾಕಷ್ಟು ಅಂಚೆಸ್ಟಾಂಪುಗಳನ್ನು ಲಗತ್ತಿಸಿರಬೇಕು. ಲೇಖನಗಳಲ್ಲಿ ಸೂಕ್ತ ಬದಲಾವಣೆ ಮಾಡಿಕೊಳ್ಳುವ ಅಧಿಕಾರ ಸಂಪಾದಕರಿಗಿದೆ. ಅನುವಾದ, ರೂಪಾಂತರ ಲೇಖನಗಳಿಗೆ ಮೂಲ ಕೃತಿಕಾರರ ಅನುಮತಿ ಪಡೆದಿರಬೇಕು. ಸ್ವೀಕೃತ ಲೇಖನಗಳಿಗೆ ಸೂಕ್ತ ಸಂಭಾವನೆ ಕೊಡಲಾಗುವುದು.

---


**"ಸಂಪಾದಕರು"**
**'ಸಿದ್ಧಗಂಗಾ' ಮಾಸ ಪತ್ರಿಕೆ**
ಶ್ರೀ ಸಿದ್ಧಗಂಗಾ ಮಠ
ತುಮಕೂರು ಜಿಲ್ಲೆ-572104.


ಇವರಿಗೆ ಕಳುಹಿಸಿಕೊಡಬೇಕಾಗಿ ಪ್ರಾರ್ಥನೆ

# ಸಂಪಾದಕೀಯ

## ವಜ್ರಮಹೋತ್ಸವ

ಸೇವೆಯನ್ನು ಗುರುತಿಸುವುದು ಸುಸಂಸ್ಕೃತ ಮನಸ್ಸಿನ ಲಕ್ಷಣ. ಗುರುತಿಸಿ ಗೌರವಿಸುವುದು ಆದರ್ಶ ಬದುಕಿನ ಲಕ್ಷಣ. ಸಮಾಜ ಸೇವೆಯನ್ನು ಶಿವಯೋಗವೆಂದು ನಡೆದಿರುವ ಪರಮ ಪೂಜ್ಯ ಶ್ರೀ ಶ್ರೀ ಗಳವರ ಭಕ್ತ ಕೋಟಿ ವಜ್ರಮಹೋತ್ಸವವನ್ನು ಚಿರಂತನ ಸ್ಮಾರಕವೆಂಬಂತೆ ರೂಪಿಸುತ್ತಿರುವುದು ಮತ್ತೊಂದು ಉತ್ತಮ ಕಾರ್ಯ. ಶ್ರೀ ಶ್ರೀ ಗಳವರು ಶ್ರೀ ಮಠ ಸಿದ್ಧಗಂಗಾ ಸೇವಾಧಿಕಾರವನ್ನು ಸ್ವೀಕರಿಸಿ ಅರವತ್ತೂರಕ್ಕೂ ಹೆಚ್ಚು ಸಂವತ್ಸರಗಳು ತುಂಬಿರುವುದು. ಆ ನೆನಪಿಗಾಗಿ ವಜ್ರ ಮಹೋತ್ಸವ. ಈ ಉತ್ಸವ ಆಡಂಬರವಾಗಿರ ಬಾರದು, ಅರ್ಥಪೂರ್ಣವಾಗಿರ ಬೇಕು, ಅನನ್ಯವಾಗಿ ಮೂಡಿಬರಬೇಕೆಂಬ ಸದಾಶಯದಿಂದ ರಚನಾತ್ಮಕ ಯೋಜನೆಯಾಗಿ ರೂಪುಗೊಂಡಿತು. ಯೋಜನೆಯ ಹಿಂದೆ ಸೇವಾಮನೋಭಾವದ ಪ್ರಬುದ್ಧ ಮನಸ್ಸು'ಗಳು ಸಕ್ರಮ ಚಿಂತನ-ಮಂಥನ ನಡೆಸಿವೆ. ಕಾರ್ಯಾನುಷ್ಠಾನಕ್ಕೆ ಮುಂದಡಿಯಿಟ್ಟಿವೆ. ಸಿದ್ಧಗಂಗೆಯ ಮಹಾ ಬೆಳಕು ಪರಮ ಪೂಜ್ಯ ಶ್ರೀ ಶ್ರೀಗಳು. ಆ ಬೆಳಕಿನಲ್ಲಿ ಅರಳಿದ, ಅರಳುತ್ತಿರುವ ದೀನ ದಲಿತ ಅಸಹಾಯಕ ಮಕ್ಕಳು ಸಹಸ್ರಾರು. ಪೂಜ್ಯರ ಸಂಕಲ್ಪಕ್ಕೆ ಒತ್ತಾಸೆಯಾಗಿ ವಜ್ರಮಹೋತ್ಸವ ಚಟುವಟಿಕೆಗಳು ನಡೆಯಬೇಕು. 'ದಾಸೋಹ' ಮಹಿಹ ಉತ್ತರೋತ್ತರ ನಿರಂತರ ನಡೆಯಬೇಕು. ಶಿಕ್ಷಣಾವಕಾಶದಿಂದ ಇಂದೂ ವಂಚಿತರಾಗುತ್ತಿರುವ ಅಮಾಯಕ ಮಕ್ಕಳು ಸಾಕ್ಷರತೆಯ ಹಣತೆಯ ಬೆಳಕನ್ನು ಕಾಣುವ ಫಲಾನುಭವಿಗಳಾಗಬೇಕು. ಪೂಜ್ಯ ಶ್ರೀಗಳವರು ನಡೆಸಿರುವ ಸೇವೆಗಳೆಲ್ಲ 'ಹರಿವನದಿಗೆ ಮೈಯೆಲ್ಲ ಕಾಲು' ಎನ್ನುವಂತಾಗಬೇಕು. ಎಂಬ ಸದ್ಭಾವದ ಸಾಂಕೇತಿಕ ಉತ್ಸವ ವಜ್ರಮಹೋತ್ಸವ. ಈಗಾಗಲೇ ಯೋಜನೆಗಳು ಪ್ರಗತಿ ಪಥದಲ್ಲಿ ಮುನ್ನಡೆದಿವೆ. ಬೃಹತ್ ವಿದ್ಯಾರ್ಥಿನಿಲಯ, ಸುವಿಶಾಲ ಪ್ರಸಾದನಿಲಯ ಸೇವೆಗೆ ತೆರೆದು ಕೊಳ್ಳುವ ಹಂತದಲ್ಲಿವೆ. ಯೋಜನೆಯ ಪದಾಧಿಕಾರಿಗಳು ಹಗಲಿರುಳು ಶ್ರಮಿಸುತ್ತಿದ್ದಾರೆ. ವಿಶ್ವ ವಿಖ್ಯಾತ ನೇತ್ರ ವೈದ್ಯರಾದ ಪದ್ಮಶ್ರೀ ಡಾ|| ಎಂ.ಸಿ. ಮೋದಿಯವರು ಗೌರವಾಧ್ಯಕ್ಷರಾಗಿರುವ ಸಮಿತಿಯಲ್ಲಿ ನಿವೃತ್ತ ಐ.ಎ.ಎಸ್. ಅಧಿಕಾರಿಗಳಾದ ಮಾನ್ಯ ಶ್ರೀ ಬಿ.ಎಸ್. ಮುದ್ದಪ್ಪನವರು ಕಾರ್ಯಾಧ್ಯಕ್ಷರಾಗಿ ಮೈಯೆಲ್ಲ ಕಣ್ಣಾಗಿ ದುಡಿಯುತ್ತಿದ್ದಾರೆ ಒಂದು ಪೈಸೆಯೂ ವ್ಯರ್ಥವಾಗದ ಹಾಗೆನೋಡಿಕೊಳ್ಳುತ್ತಿದ್ದಾರೆ. ನಿವೃತ್ತ ಐ. ಪಿ. ಎಸ್. ಅಧಿಕಾರಿಗಳಾದ ಮಾನ್ಯ ಶ್ರೀ ಎಸ್.ಎಸ್. ಹಸಬಿಯವರು, ಮಾನ್ಯ ಶ್ರೀ ಟಿ. ಕೆ. ನಂಜುಂಡಪ್ಪನವರು ಹಾಗೂ ವಾಸ್ತು ಶಿಲ್ಪ ತಜ್ಞರಾದ ಮಾನ್ಯ ಶ್ರೀ ನಾಗರಾಜಪ್ಪನವರು ಮುಕ್ತಮನಸ್ಸಿನಿಂದ ಯೋಜನೆಯ ಯಶಸ್ಸಿಗೆ ಶ್ರಮಿಸುತ್ತಿದ್ದಾರೆ. ಶ್ರೀ ಮಠದ ಭಕ್ತಾದಿಗಳ,ಅಭಿಮಾನಿಗಳ,

ಹಳೆಯ ವಿದ್ಯಾರ್ಥಿಗಳ ಪರವಾಗಿ ಎಲ್ಲ ಪದಾಧಿಕಾರಿಗಳಿಗೆ 'ಸಿದ್ಧಗಂಗಾ' ಶರಣು ಸಮರ್ಪಿಸುತ್ತದೆ.

ಬಂಧುಗಳೆ,

ವಜ್ರಮಹೋತ್ಸವದ ಯೋಜನೆ ಬೃಹತ್ತಾದುದು; ಪವಿತ್ರವಾದುದು. ಅಪಾರ ಹಣ ಅವಶ್ಯಕವಾಗಿದೆ. ನಾಡಿನ ಎಲ್ಲ ಉದಾರ ಚಿಂತರು ಕೊಡುಗೈಯಿಂದ ಕೊಡುಗೆ ನೀಡುತ್ತ ಬಂದಿದ್ದಾರೆ. ಸೇವಾಮಣಿಹದಲ್ಲಿ ಭಾಗಿಗಳಾಗುತ್ತಿದ್ದಾರೆ, ಲಕ್ಷ ರೂ. ಗಳಲ್ಲಿ ಕೊಡುಗೆ ನೀಡಿದವರಿದ್ದಾರೆ; ಸಹಸ್ರ ರೂಗಳನ್ನಿತ್ತ-ವರಿದ್ದಾರೆ; ನೂರಾರು ರೂ.ಗಳನ್ನು ಕೊಟ್ಟವರುಂಟು. ಘನತೆಗೆ ಒದಗಿದ ಈ ಅವಕಾಶವನ್ನು ಸದುಪಯೋಗಪಡಿಡಿಸಿಕೊಂಡಿದ್ದಾರೆ. ಮತ್ತೊಮ್ಮೆ 'ಸಿದ್ಧಗಂಗಾ' ತಮ್ಮಲ್ಲಿ ಬಿನ್ನವಿಸಿಕೊಳ್ಳುತ್ತಿದೆ. ಶ್ರೀಮಠದ ಸೇವಾಕೈಂಕರ್ಯವನ್ನು ಪ್ರೀತಿಸುತ್ತಿರುವ ತಾವೆಲ್ಲರೂ ಮುಕ್ತವಾಗಿ ಸಹಾಯ ಮಾಡಿ, ಸಂಸ್ಥೆಯ ಸೇವೆ ಎಂದೆಂದೂ ಮುಂದುವರಿಯಲು ಕಾರಣರಾಗುವ ಭಾಗ್ಯ ತಮ್ಮದಾಗಿಸಿಕೊಳ್ಳಿ ಎಂಬುದಾಗಿ.

**ಶರಣಾರ್ಥಿಗಳು**

---

# ಗೊಮ್ಮಟೇಶ್ವರ

—ಎಸ್. ಎಸ್. ಗದಗಕರ್, ಶುಕ್ರವಾರಪೇಟೆ, ನವಲೂರು ಲಗಸಿ, ಧಾರವಾಡ,

ವಂದಿಪೆವು ಕಡೆಗೊಮ್ಮೆ ನಿನ್ನ ಸಾನಿಧ್ಯಕ್ಕೆ,
ಹಸಿವೆ ನೀರಡಿಕೆ ದಣಿವುಗಳಾಚೆ ಸಾಗಿದವು
ನಿನ್ನ ಆಜಾನು ಬಾಹುವಿನ ಮೂರ್ತಿಯ ಕಂಡು
ಹಿರಿಯನೆಂದೆ ನಲಹುದೆ? ಹಸುಗೂಸಿನ ಮೊಗವು
ಯೋಗಾವಸ್ಥೆಯಲ್ಲಿ ಗಾಂಭೀರ್ಯವೆಂದೆಸಿತೆ !
ನೋಡಿ ನೋಡಿಯೂ ಕೂಡಾ ಮತ್ತೆ ಅದೇ ಅದೇ ಆಸೆ
ಭೂಮಂಡಲದ ಹೆಮ್ಮೆ- ಹುಚ್ಚು ಹೋರಾಟಗಳ
ಮೆಟ್ಟಿ ನಿಂತಿದೆ ಮೂರ್ತಿ, ಇದೂ ದಿವ್ಯ ಮೂರ್ತಿ !
ಮೇಲೆ ಮೇಲೆಯೇ ಹಾಗೆ ಸೋಪಾನವೇರುತಲೆ
ಸಾಗಿ ಸಾಗಿಯೆ ಸಾಗಿ ನುಗ್ಗಾದರೂ
ಕೊನೆಯ ಹರುಷಕ್ಕೆ ಏನು ಏನು ಕೊಟ್ಟರೂ ಸರಿಯೇ ?
ಕುಶಲ ಶಿಲ್ಪಿಯ ಕಲೆಯು, ಗಂಗಾ ಅರಸರ ಸಿರಿಯು
ಭರತ ಬಂಗಾಳ ದ್ವೀಪ ವೈರಾಗ್ಯ ಸಂಪದವ
ನೆಲ್ಲ ಧ್ವನಿಸುವ ನಾವ್ ಮೂಕ ವಿಸ್ಮಿತರಲ್ತೆ ?

ಪ್ರಿಯ ಓದುಗರೇ ದಯವಿಟ್ಟು ಗಮನಿಸಿ !
ವ್ಯವಹರಿಸಿ.

ಜನವರಿ-94 ರಿಂದ "ಸಿದ್ಧಗಂಗಾ" ಮಾಸ ಪತ್ರಿಕೆಯ ಚಂದಾವನ್ನು ಕೆಳಗಿನಂತೆ ಪರಿಷ್ಕರಿಸಲಾಗಿದೆ.

**ವಾರ್ಷಿಕ ಚಂದಾ : 30/-ರೂ.ಗಳು**

**ಆಜೀವ ಸದಸ್ಯತ್ವ : 350/-ರೂ.ಗಳು**

ಪ್ರಕಾಶಕರು.

**'ಸಿದ್ಧಗಂಗಾ' ಚಿರಾಯುವಾಗಲೆಂದು ಹರಸಿ ಹಾರೈಸಿರುವ ಆಜೀವ ಸದಸ್ಯರ ಬಳಗ.**

1413 ಶ್ರೀ ವಿ. ಎಸ್. ಸದಾಶಿವಯ್ಯ, ಗೋವಿಂದರಾಜ ನಗರ, ಬೆಂಗಳೂರು-40

1414 ಶ್ರೀ ಎನ್. ನಂಜಪ್ಪ, ಶಿಕ್ಷಕರು, ಮಲ್ಲಸಂದ್ರ, ಬೆಂಗಳೂರು ಉತ್ತರ ತಾಲ್ಲೂಕು.

1415 ಮಲ್ಲೇಶಯ್ಯ, S/o ಶ್ರೀ ರುದ್ರಯ್ಯ, ಬೈಯಂಡಹಳ್ಳಿ, ಬೆಂಗಳೂರು-50

1416 ಶ್ರೀ ವಿ. ಶಿವಲಿಂಗಯ್ಯ, ವಿಜಯನಗರ, ಬೆಂಗಳೂರು-40

1417 ಶ್ರೀ ಕೆ. ಎಂ. ಶಿವಣ್ಣ S/o ಶ್ರೀ ಮುದ್ದವೀರಯ್ಯ ಕನಕೇನಹಳ್ಳಿ, ಮಾಗಡಿ ತಾಲ್ಲೂಕು, ಬೆಂಗಳೂರು ಜಿಲ್ಲೆ,

1418 ಡಾ|| ಶ್ರೀ ಮೃತ್ಯುಂಜಯ S/o ಶ್ರೀ ವೃಷಭೇಂದ್ರಸ್ವಾಮಿ ಮಾಲ್ಲೂರು, ಕೊಳ್ಳೇಗಾಲ ತಾ||, ಮೈಸೂರು ಜಿಲ್ಲೆ.

(ಮುಂದುವರಿಯುತ್ತದೆ.)

# ನಮ್ಮ ಶಿಕ್ಷಣ ಕ್ಷೇತ್ರ ಕುರುಕ್ಷೇತ್ರವಾಗಿದೆಯೇ ?

—ಕೆ. ಆರ್. ಉಡುಪ ನಿವೃತ್ತ ಪ್ರಾಂಶುಪಾಲರು, ಎಂ. 5, "ಶ್ರೀಕರ" ಕುವೆಂಪುನಗರ, ಮೈಸೂರು-570023

"ಮೇರಾ ಭಾರತ್ ಮಹಾನ್" ಎಂದು ಹಿಂದಿನ ನಮ್ಮ ಪ್ರಧಾನಿ ದಿ|| ರಾಜೀವ ಗಾಂಧಿಯವರು ಸಾರಿದ್ದರು. ದೇಶಕ್ಕೆ ಸ್ವಾತಂತ್ರ್ಯ ಬಂದು 45 ವರ್ಷ ಉರುಳಿದೆ. ಜನ ಸಾಮಾನ್ಯನ ಮೂಲಭೂತ ಆವಶ್ಯಕತೆಗಳು ಮೂರು : ಅಶನ, ವಸನ, ಮತ್ತು ವಸತಿ. ಈ ವಿಚಾರದಲ್ಲಿ ನಮ್ಮ ಸಾಧನೆ ತೃಪ್ತಿಕರವಾಗಿಲ್ಲ. ದೇಶದ ಶೇಕಡ 50 ರಷ್ಟು ಜನರಿಗೆ ಈ ಸವಲತ್ತೂ ದೊರಕುವುದಿಲ್ಲ. ಹಾಗಾಗಿ ಅವರು ಬಡತನದ ರೇಖೆಯಿಂದ ಕೆಳಗಿದ್ದಾರೆ ಎಂದು ತಜ್ಞರು ಸಾರಿದ್ದಾರೆ.

ಆದರೆ ಒಂದು ವಿಚಾರದಲ್ಲಿ ಭಾರತ " ಮಹಾನ್ " ಪಟ್ಟಗಿಟ್ಟಿಸಿ ಕೊಂಡಿದೆ. ಜಗತ್ತಿನಲ್ಲಿ ಅತ್ಯಂತ ಹೆಚ್ಚಿನ ಸಂಖ್ಯೆಯ ನಿರಕ್ಷರರನ್ನು ಹೊಂದಿದ ದೇಶ-ಭಾರತ ! ನಮ್ಮ ಈಗಿನ ಜನಸಂಖ್ಯೆ ಸಾಮಾನ್ಯ 90 ಕೋಟಿ. ಈ ಶತಮಾನಾಂತ್ಯದಲ್ಲಿ ಇದು ನೂರು ಕೋಟಿ ದಾಟ ಬಹುದು ದೇಶದಲ್ಲಿ ಅಕ್ಷರ ಬಲ್ಲವರ ಸಂಖ್ಯೆ ನೂರಕ್ಕೆ 50. ಅಕ್ಷರ ಬಲ್ಲವ ಎಂದರೆ 'ಬಸವ' ಎಂದು ತನ್ನ ಹೆಸರನ್ನು ಗೀಚಬಲ್ಲವ-ಅಕ್ಷರಸ್ಥ, ಹಾಗೆ ಲೆಖ್ಖಹಾಕಿದರೂ ದೇಶದ 50 ಕೋಟಿ ಜನ ಅಕ್ಷರ ಬಾರದವರು ಪ್ರಪಂಚ ಜ್ಞಾನ ಇಲ್ಲದವರು. ಆದರಿಂದಲೇ ಬಡತನ ರೇಖೆಯಿಂದ ಕೆಳಗೆ ಉಳ್ಳವರು. ಭಾರತ ದಲ್ಲಿ ಇಂಥವರ ಸಂಖ್ಯೆ 50 ಕೋಟಿ. ಪ್ರಪಂಚದ ಇನ್ನಾವ ದೇಶದಲ್ಲೂ ಇಂಥವರು, ಇಷ್ಟು ಸಂಖ್ಯೆಯಲ್ಲಿ ಇಲ್ಲ-ಎಂದಾಗ 'ಭಾರತ್ ಮಹಾನ್' ಅಲ್ಲವೇ ?

**ಮಿತ ಸಂತಾನ**- ಈ ಅನಿಷ್ಟ ಬಿರುದಿನ ಪ್ರಮುಖಕಾರಣ-ದೇಶದ ಜನ ಸಾಮಾನ್ಯರಲ್ಲಿ 'ಮಿತ ಸಂತಾನ' ದ ಪ್ರಜ್ಞೆ ಹಾಗೂ ಶಿಕ್ಷಣ ಇಲ್ಲದಿರುವುದು.

ಜನ ಸಂಖ್ಯಾ ದೃಷ್ಟಿಯಿಂದ ಭಾರತಕ್ಕಿಂತ ಹೆಚ್ಚಿನ ಜನಸಂಖ್ಯೆ ಚೀನಾ ದೇಶದ್ದು. ಚೀನಾ ದೇಶದ ವಿಸ್ತಾರ ಭಾರತದ ಮೂರು ಪಾಲು. ಆದರೂ ಅವರ ಈಗಿನ ಜನಸಂಖ್ಯೆಯನ್ನು ನೂರು ಕೋಟಿಯಲ್ಲಿ ನಿಲ್ಲಿಸಿದ್ದಾರೆ. 'ಒಂದು ಸಂಸಾರ; ಒಂದು ಮಗು' ಎಂಬ ನಿಯಮವನ್ನು ಕಟ್ಟುನಿಟ್ಟಾಗಿ ಪಾಲಿಸುತ್ತಲೂ ಬರುತ್ತಿದ್ದಾರೆ. ಹೀಗೆ ಜನಸಂಖ್ಯಾವೃದ್ಧಿಗೆ ತಡೆಹಾಕಿದ್ದಾರೆ.

ಭಾರತದಲ್ಲಿ ಸರ್ಕಾರದ ನೀತಿ 'ನಾವಿಬ್ಬರು ನಮಗಿಬ್ಬರೇ ಮಕ್ಕಳು ? ಈ ನೀತಿ ಸಹ ಗೋಡೆ ಬರಹದಲ್ಲಿ ಅಥವಾ ಟಿ. ವಿ. ರೇಡಿಯೋಗಳಲ್ಲಿ, ಆಚರಣೆಯಲ್ಲಿ ಇಲ್ಲ. ಎರಡು ಮಕ್ಕಳನ್ನು ಪಡೆದವರಿಗೆ ಸರ್ಕಾರದಿಂದ ಪುರಸ್ಕಾರವೂ ಇಲ್ಲ; ಏಳೆಂಟು

ಮಕ್ಕಳುಳ್ಳವರಿಗೆ ತಿರಸ್ಕಾರವೂ ಇಲ್ಲ; ದೇಶ ಆಳುವ ಮಂತ್ರಿ ಮಹೋದಯರಲ್ಲೇ ಅಗ್ರಗಣ್ಯರು 8-10 ಮಕ್ಕಳುಳ್ಳವರು.

ದೇಶ ಸ್ವತಂತ್ರವಾದಾಗ ಇದ್ದ ಜನ ಸಂಖ್ಯೆ 45 ಕೋಟಿ. ಈಗದು ಇಮ್ಮಡಿಯಾಗಿದೆ ಭಾರತದ ಮಿತ ಸಂತಾನದ ನೀತಿ ಬಹು ಸಂಖ್ಯಾತ ಹಿಂದೂಗಳಿಗೆ ಮಾತ್ರ ಅನ್ವಯವಾಗುತ್ತಿದೆ. ಭಾರತದ 14 ಕೋಟಿಯಷ್ಟು ಮುಸ್ಲಿಮರಿಗೆ ಮದುವೆಗೂ ಮಿತಿ ಇಲ್ಲ. ಸಂತಾನಕ್ಕೂ ಮಿತಿ ಇರಬೇಕಾಗಿಲ್ಲ. ಇದೇನೀತಿ ಮುಂದುವರಿದರೆ ಇನ್ನೂ ಐವತ್ತು ವರ್ಷಗಳಲ್ಲಿ ಮುಸ್ಲಿಮರು ಭಾರತದಲ್ಲಿ ಬಹುಸಂಖ್ಯಾತರಾಗುತ್ತಾರೆ ಎಂದು ಸಂಖ್ಯಾಶಾಸ್ತ್ರಜ್ಞರು ಹೇಳುತ್ತಾರೆ. ಆದರೆ ನಮ್ಮ ರಾಷ್ಟ್ರ ಜಾತ್ಯತೀತವಾದ್ದರಿಂದ ಅದರಿಂದೇನೂ ಬಾಧಕವಾಗಲಾರದಲ್ಲವೇ ?

ಎನಿದ್ದರೂ 'ಮಿತ ಸಂತಾನದ' ದ ಅನುಷ್ಠಾನದಲ್ಲಿ ನಮ್ಮ ಧುರೀಣರಿಗೆ ಪ್ರಾಮಾಣಿಕತೆ ಇಲ್ಲ ಅದರಲ್ಲೂ ಮತಾಧಾರಿತ ದ್ವಿವಿಧ ನೀತಿ! ಪರಿಣಾಮವಾಗಿ ಜನಸಂಖ್ಯೆಯು ಮಿತಿಮೀರಿದ ಏರಿಕೆ. ಬಡತನ, ನಿರಕ್ಷರರ ಸಂಖ್ಯಾವೃದ್ಧಿ, ಪರಿಸರ ಮಾಲಿನ್ಯ ಮುಂತಾದ ಅನಿಷ್ಟ ಪರಿಣಾಮಗಳು. ಇವುಗಳ ಸರಪಣಿ ದೇಶದ ಎಲ್ಲ ಜನರ ಕೊರಳಿಗೂ ಬೀಳುವುದರಲ್ಲಿ ಸಂಶಯವಿಲ್ಲ.

**ಪ್ರಾಥಮಿಕ ಶಿಕ್ಷಣದ ಕಥೆ ಅಥವಾ ವ್ಯಥೆ:** ಜನ ಸಾಮಾನ್ಯರಿಗೂ 'ಮಿತ ಸಂತಾನ' ದ ಮಹತ್ವ ತಿಳಿಯಬೇಕಾದರೆ ಕನಿಷ್ಠ ಪ್ರಾಥಮಿಕ ಶಿಕ್ಷಣವಾದರೂ ಕಡ್ಡಾಯವಾಗಿ ದೊರಕಬೇಕು. ಹೆಚ್ಚಿನವರ ಕಡು ಬಡತನ ಈ ವಿಚಾರದಲ್ಲಿ ಅಡ್ಡಿ ಬರುವುದು ಸ್ವಾಭಾವಿಕ. ಮಕ್ಕಳು ಶಾಲೆಗೆ ಹೋದರೆ ದುಡಿದು ತರುವವರು ಯಾರು ಎಂಬ ಸಮಸ್ಯೆ ಬಂದೇ ಬರುತ್ತದೆ. ಈ ಸಂದರ್ಭದಲ್ಲಿ ಮಿತ ಸಂತಾನದ ಪ್ರಯೋಜನ ಅಂಥವರಿಗೆ ಅರಿವಾಗುತ್ತದೆ. ಒಬ್ಬಿಬ್ಬರು ಮಕ್ಕಳು ಮಾತ್ರ ಇದ್ದರೆ ತಂದೆಯ ದುಡಿಮೆ ಹೆಂಡತಿ ಮಕ್ಕಳ ಹೊಟ್ಟೆಗೆ ಹಿಟ್ಟುಕೊಡಲು ಸಾಕಾಗಬಹುದು. ಮಕ್ಕಳು ದೊಡ್ಡವರಾಗಿ ಶಾಲೆಗೆ ಹೋದಾಗ ತಾಯಿಯೂ ದುಡಿಯಬಹುದು. ಚಿಕ್ಕಸಂಸಾರದ ಎಲ್ಲರೂ ನೆಮ್ಮದಿಯಾಗಿರ ಬಹುದು. ಮಕ್ಕಳೂ ಸಮರ್ಥ ಪ್ರಜೆಗಳಾಗಿ ಮುಂದೆ ಬರುವಂತಾಗಬಹುದು. ಬದಲಾಗಿ, ಏಳೆಂಟು ಮಕ್ಕಳು ಮನೆಯಲ್ಲಿದ್ದಲ್ಲಿ ಅವರಲ್ಲಿ ದೊಡ್ಡವರನ್ನು ಕೂಲಿ ಕೆಲಸಕ್ಕೋ ಭಿಕ್ಷಾಟನೆಗೋ ಕಳಿಸಲೇಬೇಕಾಗುತ್ತದೆ. ಹಾಗಾದಾಗ ಅವರು ಅಕ್ಷರಸ್ಥರಾಗುವುದು ಹೇಗೆ?

ಪ್ರಾಥಮಿಕ ಶಿಕ್ಷಣ ಕಡ್ಡಾಯಗೊಳಿಸಿದಾಗ ಶಾಲೆಯ ಪರಿಸ್ಥಿತಿಯೂ ಆಕರ್ಷಕವಾಗಿರಬೇಕು. ಬಡಮಕ್ಕಳಿಗೆ ಮಧ್ಯಾಹ್ನದ ಊಟ, ಉಚಿತ ಸಮವಸ್ತ್ರ, ಪಠ್ಯಪುಸ್ತಕ ಇವನ್ನೆಲ್ಲ ಒದಗಿಸಬೇಕು. ಆಗಪೋಷಕರು ಮಕ್ಕಳನ್ನು ಸಂತೋಷದಿಂದ ಶಾಲೆಗೆ

ಕಳಿಸುತ್ತಾರೆ. ಬಾಲಕ ಬಾಲಕಿಯರೂ ಹುರುಪಿನಿಂದ ಶಾಲೆಯತ್ತ ಸಾಗುತ್ತಾರೆ. ಈ ಕಾರ್ಯಕ್ರಮ ತಮಿಳುನಾಡಿನಲ್ಲಿ ಬಹುಮಟ್ಟಿಗೆ ಜಯಪ್ರದವಾಗಿದೆ.

ಆದರೆ, ದೇಶದ ಹೆಚ್ಚಿನ ಪ್ರಾಥಮಿಕ ಶಾಲೆಗಳ ಪರಿಸ್ಥಿತಿ ಶೋಚನೀಯವಾಗಿದೆ. ಮೂರುವರ್ಷಗಳ ಹಿಂದೆ ಪ್ರಕಟವಾದ ಒಂದು ವರದಿಯಂತೆ ದೇಶದ ಶೇಕಡಾ 40 ಶಾಲೆಗಳು ಏಕೋಪಾಧ್ಯಾಯ ಸಂಸ್ಥೆಗಳು. ಕರ್ನಾಟಕದಲ್ಲೇ ಅಂಥ ಶಾಲೆಗಳು 12,000 ಕ್ಕೂ ಮೀರಿವೆ, ಆ ಶಾಲೆಗಳಲ್ಲಿ ಕರಿಹಲಗೆಯೂ ಇಲ್ಲ. ಮಾಡುಗೋಡೆ ಸಹ ಸರಿಯಾಗಿಲ್ಲ. ಒಬ್ಬಿಬ್ಬ ಶಿಕ್ಷಕ, ಒಂದು ಮುರುಕಲು ಕೋಣೆ, ಐದು ತರಗತಿ, ನೂರಾರು ವಿದ್ಯಾರ್ಥಿಗಳು. !

ಇಂತಹ ಶಾಲೆಗಳ ಹೆಚ್ಚಿನ ಶಿಕ್ಷಕರು ಸಹ ಅರ್ಹತೆ ಮತ್ತು ಆಸಕ್ತಿಯ ಆಧಾರದ ಮೇಲೆ ಆಯ್ಕೆ ಗೊಂಡವರಲ್ಲ. ಜಾತ್ಯತೀತ ರಾಷ್ಟ್ರದಲ್ಲಿ ಜಾತ್ಯಾಧಾರಿತ ಮೀಸಲಾತಿ ನಿಯಮದಂತೆ ಆಯ್ಕೆಗೊಂಡವರು. ಅಥವಾ ಲಂಚ ನೀಡಿ ಶಿಕ್ಷಕರಾದವರು. 'ದೇಶದ ಜನ ಸಾಮಾನ್ಯರ ಜ್ಞಾನಮಟ್ಟ ಶಿಕ್ಷಕರ ಜ್ಞಾನಮಟ್ಟಕ್ಕನುಗುಣವಾಗಿರುತ್ತದೆ.' ಇದು ಶಿಕ್ಷಣ ತಜ್ಞರ ಅಭಿಪ್ರಾಯ. ಅದನ್ನೇ ಹಿರಿಯರು 'ಯಥಾಗುರು ತಥಾಶಿಷ್ಯ.' ಅಂದರೆ ಗುರುವಿನಂತೆ ಶಿಷ್ಯ. ಗುರು ಜಾಣನಾಗದಿದ್ದರೆ ಶಿಷ್ಯ ಕೋಣನಾಗುತ್ತಾನೆ ಎಂದಿದ್ದಾರೆ.

ಸೈನ್ಯ, ಉಚ್ಚಮಟ್ಟದ ವಿಜ್ಞಾನ, ತಂತ್ರಜ್ಞಾನ ಮುಂತಾದ ಕೆಲ ನಿರ್ದಿಷ್ಟ ಕ್ಷೇತ್ರಗಳಲ್ಲಿ ಜಾತಿವಾರು ಮೀಸಲಾತಿಗೆ ಅವಕಾಶವಿಲ್ಲ ಉಚ್ಚ ಮಟ್ಟದ ಅರ್ಹತೆ ಇದ್ದವನನ್ನು ಅವನು ಯಾವ ಜಾತಿಗೆ ಸೇರಿದವನಾಗಲಿ, ಆಯ್ಕೆ ಮಾಡುತ್ತಾರೆ. ಅದೇ ತರ ಶಿಕ್ಷಣ ಕ್ಷೇತ್ರದಲ್ಲೂ ಅರ್ಹತೆ ಮತ್ತು ಆಸಕ್ತಿಗಳಿಗೆ ಮಾನ್ಯತೆ ಇರಬೇಕು. ಆಗ ಇಂದಿನ ಮಕ್ಕಳು ಮುಂದೆ ಸಮರ್ಥ ಪ್ರಜೆಗಳಾಗಿ ಮುಂದು ಬರುವುದರಲ್ಲಿ ಸಂಶಯವಿಲ್ಲ. ಅದರಲ್ಲೂ ಪ್ರಾಥಮಿಕ ಹಂತದಲ್ಲಿ ಶಿಕ್ಷಕಿಯರಿಗೆ ಆದ್ಯತೆ ಇರಬೇಕು ಅವರ ಮೃದು ಸ್ವಾಭಾವ ಎಳೆಮಕ್ಕಳಿಗೆ ಹಿತಕರವಾಗಿರುತ್ತದೆ.

ಬ್ರಿಟಿಶರ ಕಾಲದಲ್ಲಿ ಪ್ರಾಥಮಿಕ ಶಾಲಾ ತರಗತಿಗಳಲ್ಲಿ ಗರಿಷ್ಠ 30 ವಿದ್ಯಾರ್ಥಿಗಳಿಗೆ ಒಬ್ಬ ಶಿಕ್ಷಕ ನಿರುತ್ತಿದ್ದ. ಆದರೆ ಸ್ವತಂತ್ರ ಭಾರತದಲ್ಲಿ 60 ವಿದ್ಯಾರ್ಥಿಗಳಿಗೆ ಒಬ್ಬ ಶಿಕ್ಷಕ. ಏಕೋಪಾಧ್ಯಾಯ ಶಾಲೆಗಳಲ್ಲಿ ನೂರಕ್ಕೊಬ್ಬ.

ಹೀಗೆ ಪ್ರಾಥಮಿಕ ಹಂತದಲ್ಲಿ ಮೂಲಭೂತ ಅನುಕೂಲತೆಗಳೂ ಇಲ್ಲದಾಗ, ಶಾಲೆ ಸೇರಿ' ಬಿಟ್ಟು ಹೋಗುವವರ ಸಂಖ್ಯೆ ಏರುತ್ತಲೇ ಹೋಗುತ್ತಿದೆ. ಒಂದು ವರದಿಯಂತೆ, 1ನೇ ತರಗತಿಗೆ ಸೇರಿದ ನೂರು ಮಕ್ಕಳಲ್ಲಿ 75% ಐದನೇ ತರಗತಿಗೆ

ಬರುವಾಗ ಶಾಲೆ ಬಿಟ್ಟು ಹೋಗಿರುತ್ತಾರೆ. ಶಾಲೆಯ ವಾತಾವರಣ ಹದಗೆಟ್ಟಿರುವಾಗ ಮಕ್ಕಳು ಶಾಲೆಗೆ ಹೋದರೂ ಒಂದೇ; ಬಿಟ್ಟರೂ ಒಂದೇ-ಅಲ್ಲವೇ?

ಉತ್ತಮ ಪ್ರಾಥಮಿಕ ಶಿಕ್ಷಣದ ಮಹತ್ವವನ್ನು ಸ್ವತಂತ್ರ ಭಾರತದ ಸಂವಿಧಾನ ತಜ್ಞರು ಅರಿತಿದ್ದರು. ನಮ್ಮ ಪ್ರಪ್ರಥಮ ಪ್ರಧಾನಿ ಪಂಡಿತ ಜವಾಹರಲಾಲನೆಹರು ಅವರು ಆ ಸಂದರ್ಭದಲ್ಲಿ ಹೀಗೆ ಸಾರಿದ್ದರು 'ಸ್ವತಂತ್ರ ಭಾರತದ ಮೊದಲ ಹತ್ತು ವರ್ಷಗಳೊಳಗೆ 6 ರಿಂದ 14 ವರುಷದ ನಡುವಣ ವಯೋಮಾನದ ಪ್ರತಿಯೊಂದು ಮಗುವಿಗೂ ಉಚಿತ ಹಾಗೂ ಕಡ್ಡಾಯ ಶಿಕ್ಷಣ ನೀಡಬೇಕು' ಎಂದು ಸಂವಿಧಾನದ ನಿರ್ದೇಶಕ ತತ್ವಗಳಲ್ಲಿ ಸೇರಿಸಿದ್ದರು.

ಇಂತಹ ಮಹತ್ವಪೂರ್ಣ ನಿರ್ಧಾರ ಅನುಷ್ಠಾನದಲ್ಲೇನಾಯಿತು? ಈ ನಿರ್ಧಾರಕ್ಕೆ 45 ವರ್ಷ ದಾಟಿದರೂ ಇನ್ನೂ ಕುಂಟುತ್ತಲೇ ಇದೆ. ಶೇಕಡ 50 ರಷ್ಟು ಮಾತ್ರ ಸಾಕ್ಷರರಾಗಿದ್ದಾರೆ. ಜನ ಸಂಖ್ಯೆಯಲ್ಲಿ ಅರ್ಧಾಂಶವಿರುವ ಮಹಿಳೆಯರಲ್ಲಿ ನೂರಕ್ಕೆ 30 ರಷ್ಟು ಮಾತ್ರ ಅಕ್ಷರ ಬಲ್ಲವರು. ಅವರಲ್ಲೂ 'ಕಮಲ' ಎಂದು ತನ್ನ ಹೆಸರನ್ನು ಗೀಚ ಬಲ್ಲವರು ಬಹಳ!

ದೇಶದ ಜನರು ಮೂಲಭೂತ ಶಿಕ್ಷಣವನ್ನಾದರೂ ಪಡೆದಿದ್ದರೆ, ಅದರಲ್ಲೂ ಮಹಿಳೆಯರು ಶಿಕ್ಷಿತರಾಗಿದ್ದರೆ ನಮ್ಮ ಜನ ಸಂಖ್ಯೆ ಮಿತಿಮೀರಿ ಏರುತ್ತಿದ್ದಿಲ್ಲ. ಶಿಕ್ಷಿತರಲ್ಲಿ ವಿವಾಹ ವಯಸ್ಸು ಏರಿರುತ್ತದೆ. ಒಂದು ಅಥವಾ ಎರಡು ಮಕ್ಕಳಾದೊಡನೆ, ಮುಂದಿನ ಮಗು ಮೂಡದಂತೆ ನೋಡಿಕೊಳ್ಳುತ್ತಾರೆ. ಬಹು ಸಂಖ್ಯಾತ ಶಿಕ್ಷಿತರಿರುವ ಕೇರಳ ರಾಜ್ಯದಲ್ಲಿ ಈ ಫಲಿತಾಂಶವನ್ನು ತಜ್ಞರು ಕಂಡು ಕೊಂಡಿದ್ದಾರೆ.

ಜಾಗತಿಕ ಸಂಸ್ಥೆಯ ಸಮೀಕ್ಷೆಯಂತೆ "ಯಾವುದೇ ದೇಶದ ಪ್ರಜೆಗಳಲ್ಲಿ ಸರಿಯಾದ ಶಿಕ್ಷಣ ದೊರೆತಾಗ ನೈರ್ಮಲ್ಯ ಪ್ರಜ್ಞೆ ಬೆಳೆದು ಬರುತ್ತದೆ. ಅದರಿಂದಾಗಿ ಆರೋಗ್ಯ ಮತ್ತು ಮಿತ ಸಂತಾನ ಸಾಧಿಸುತ್ತಾರೆ. ದುಡಿಮೆಯ ಮಹತ್ವ ತಿಳಿದು ಕೊಳ್ಳುತ್ತಾರೆ. ಜೀವನದ ಮೂಲಭೂತ ಆವಶ್ಯ ಕತೆಗಳನ್ನು ಮಾಡಿಕೊಂಡಿರುತ್ತಾರೆ. ಹೀಗೆ ಶಿಕ್ಷಣಕ್ಕೆ ಸಾಕಷ್ಟು ವೆಚ್ಚಗೈದರೆ ವ್ಯಕ್ತಿ ಹಾಗೂ ದೇಶ ಸಮೃದ್ಧವಾಗುತ್ತದೆ." ಇದು ಸರ್ವಥಾ ಸತ್ಯ.

ಶಿಕ್ಷಣದ ಗುರಿ ಸಾಧನೆಯಲ್ಲೂ ಸಾಕಷ್ಟು ಬದಲಾವಣೆ ಅಗತ್ಯ. ನೈತಿಕ ಪ್ರಜ್ಞೆಯುಳ್ಳ ಸುಸಂಸ್ಕೃತ ಪ್ರಜೆಗಳು ನಮ್ಮ ಶಾಲೆಗಳಿಂದ ಉದಯಿಸಿ ಬರಬೇಕು. ಬೌದ್ಧಿಕ ಶಿಕ್ಷಣದೊಡನೆ ಕೃಷಿ ಕೈಗಾರಿಕೆಗಳಿಗೆ ಸಂಬಂಧಿಸಿದ ವೃತ್ತಿ ಶಿಕ್ಷಣದಲ್ಲೂ ತರಬೇತಿ ದೊರಕಬೇಕು. "ಅರ್ಥಕರೀಚ ವಿದ್ಯಾ" ಅಂದರೆ ಜೀವನಕ್ಕೆ ಬೇಕಾದ ಸಾರ್ಥಕ

ಶಿಕ್ಷಣ ಪಡೆಯುವಂತಾಗಬೇಕು. ಆಗ ಇಂದಿನ ವಿದ್ಯಾರ್ಥಿಗಳು ಮುಂದೆ ಸಂಸಾರಕ್ಕೂ ದೇಶಕ್ಕೂ ಭಾರವಾಗಲಾರರು.

ಇಂದಿನ ಪ್ರಾಥಮಿಕ ಶಿಕ್ಷಣದ ಅಧೋಗತಿಗೆ ಮೇಲೆ ಹೇಳಿದಂತೆ ಕಾರಣಗಳು ಹಲವು. ಅವಲ್ಲದೆ, ಇನ್ನೊಂದು ದೊಡ್ಡ ಕಾರಣ ಕೇಂದ್ರ ಹಾಗೂ ರಾಜ್ಯ ಸರ್ಕಾರಗಳು ಪ್ರಾಥಮಿಕ ಶಿಕ್ಷಣಕ್ಕೆ ಆದ್ಯತೆಯನ್ನು ( Priority ) ಕಲ್ಪಿಸದಿರುವುದು. ರಾಷ್ಟ್ರೀಯ ವರಮಾನದಲ್ಲಿ ಶೇಕಡಾ 10 ನ್ನು ಶಿಕ್ಷಣಕ್ಕೊದಗಿಸಬೇಕೆಂಬುದು ಶಿಕ್ಷಣ ತಜ್ಞರ ಅಭಿಮತ. ಅದೂ ಕ್ರಮೇಣ ಕಡಿಮೆ ಯಾಗುತ್ತ 6% ಕ್ಕಿಳಿದು ಈಗ 3.5% ರಲ್ಲಿ ನಿಂತಿದೆ. ಆ ಕುಂದಿದ ಹಣದಲ್ಲಿ ಪ್ರಾಥಮಿಕ ಶಿಕ್ಷಣಕ್ಕೆ 56%, ಉಚ್ಚ ಶಿಕ್ಷಕ್ಕೆ 18 ಶೇ. ಎಂದು ವಿಭಜನೆಯಾಗಿತ್ತು. ಇದು ಸಹ ಪ್ರಾಥಮಿಕ ಶಿಕ್ಷಣದ ಮಟ್ಟಿಗೆ ಇನ್ನಷ್ಟು ಕೃಶವಾಗಿ ಈಗ ಶೇ.29 ಕ್ಕಿಳಿದಿದೆ. ಉಚ್ಚ ಶಿಕ್ಷಣದ ಪಾಲು ಶೇ.44 ಕ್ಕೇರಿದೆ.

ಇತ್ತ ಜನಸಂಖ್ಯೆ ಹಾಗೂ ಪ್ರಾಥಮಿಕ ಶಾಲೆಗಳಲ್ಲಿ ಮಕ್ಕಳ ಸಂಖ್ಯೆ ಏರುತ್ತ ಬಂತು. ಸರ್ಕಾರದ ಅನುದಾನ ಕಡಿಮೆಯಾಗುತ್ತ ಬಂತು. ಹಾಗಾಗಿ ಪ್ರಾಥಮಿಕ ಶಿಕ್ಷಣ ಯಾರಿಗೂ ಬೇಡದ ಅನಾಥ ಶಿಶುವಿನಂತಾದುದು ಸಹಜ.

ಆದರೆ ದೈವವಶಾತ್ ದೂರದೃಷ್ಟಿಯುಳ್ಳ ಸಮಾಜ ಸೇವಾ ಧುರೀಣರು ಮತ್ತು ಸಂಸ್ಥೆಗಳವರು ಈ ಸಂದರ್ಭದಲ್ಲಿ ಮುಂದೆ ಬಂದರು. ಸರ್ಕಾರದ ಪ್ರಯತ್ನಗಳಿಗೆ ಪೂರಕ ಪ್ರಯತ್ನ ನಡೆಸಲಾರಂಭಿಸಿದರು. ಊರವರೇ ತಮ್ಮದಾದ ಶಿಕ್ಷಣ ಸಂಸ್ಥೆಗಳನ್ನು ಕಟ್ಟಿ ಉತ್ತಮ ಮಟ್ಟದ ಶಿಕ್ಷಣವನ್ನು ತಮ್ಮ ಮಕ್ಕಳಿಗೆ ಒದಗಿಸುತ್ತಲಿದ್ದಾರೆ ಆ ಕಾರಣ, ಈ ಮಟ್ಟದಲ್ಲಾದರೂ ದೇಶ ಉಳಿದಿದೆ.

**ವಯಸ್ಕರ ಶಿಕ್ಷಣದ ಸೋಗು :-** ಪ್ರಾಥಮಿಕ ಶಿಕ್ಷಣ ಕ್ಷೇತ್ರದಲ್ಲಿ ಸೋತು ಹೋದ ಸರ್ಕಾರ, ವಯಸ್ಕರ ಶಿಕ್ಷಣ ಪ್ರಸಾರ ಕೈಗೊಂಡು ಪ್ರಾಯಶ್ಚಿತ್ತ ಮಾಡಿಕೊಳ್ಳಲು ಇತ್ತೀಚೆ ನಿರ್ಧರಿಸಿದೆ. ಅದಕ್ಕಾಗಿ ಕೇಂದ್ರ ಸರ್ಕಾರ ಕಳೆದ 8-10 ವರ್ಷಗಳಲ್ಲಿ ಓದು ಬಾರದ ವಯಸ್ಕರಿಗೆ ಅಕ್ಷರ ಕಲಿಸುವ ವಿಭಾಗವನ್ನು ಬಲಪಡಿಸುತ್ತ-ಲಿದ್ದಾರೆ. ಅದಕ್ಕಾಗಿ ಸಾವಿರಾರು ಕೋಟಿ ರೂಪಾಯಿಗಳನ್ನು ರಾಜ್ಯ ಸರ್ಕಾರಗಳಿಗೆ ಅನುದಾನವಾಗಿ ಕೊಡುತ್ತಿದ್ದಾರೆ.

ಆದರೆ ಈ ಅನುದಾನದ ಸಿಂಹಪಾಲು ಆಡಳಿತಾಧಿಕಾರಿಗಳ ವೇತನ, ವಾಹನ, ಪ್ರಯಾಣ ಭತ್ತೆಗಳಿಗಾಗಿ ವೆಚ್ಚವಾಗುತ್ತಿದೆ. ಪ್ರತಿ ರಾಜ್ಯದಲ್ಲೂ ಇದಕ್ಕೊಬ್ಬ ನಿರ್ದೇಶಕ, ಉಪನಿರ್ದೇಶಕ, ಸಹ-ನಿರ್ದೇಶಕ, ಇವರ ಕಛೇರಿ ಸಿಬ್ಬಂದಿ, ಮುಂತಾದ ಹಲವು ಹಂತದ ಸಂಸಾರ ಬೆಳೆದಿದೆ, ಇವೆಲ್ಲದರ ಉಸ್ತುವಾರಿ ನೋಡಿಕೊಳ್ಳಲಿಕ್ಕೆ

ರಾಜಕೀಯ ಮುಖಂಡರ ಅಧ್ಯಕ್ಷಗಿರಿ-ಅವರ ಗೌರವಧನ, ದೇಶ ವಿದೇಶಗಳ ಪ್ರಯಾಣ ವೆಚ್ಚ, ಕಾರು, ಜೀಪು, ಮನೆ, ಬಂಗಲೆ, ಕಛೇರಿಗಳ ಬಾಡಿಗೆ-ಇತ್ಯಾದಿಗಳ ನಿರ್ವ-ಹಣೆಗಾಗಿ ಹಣ ಖರ್ಚಾಗುವುದು ಸ್ವಾಭಾವಿಕ. ಈ ವೈಭವೀಕರಣ-ರಾಜ್ಯ, ಜಿಲ್ಲೆ, ತಾಲ್ಲೂಕು, ಮಂಡಲ ಮಟ್ಟಗಳಲ್ಲಿ ಯಥಾಶಕ್ತಿ ನಡೆಯುತ್ತಲೇ ಇದೆ. ಉಳಿದ ಹಣವನ್ನು ಆಯ್ದ ಒಂದೊಂದು ಜಿಲ್ಲೆಯಲ್ಲಿ 8-10 ತಿಂಗಳುಗಳ ಸಂಪೂರ್ಣ ಸಾಕ್ಷರರನ್ನಾಗಿಸುವ T.L.C, (Total Literary Compain) ಕಾರ್ಯಕ್ರಮಗಳ ಆರಂಭೋತ್ಸವ ಮತ್ತು ಸಮಾರೋಪ ಸಮಾರಂಭಗಳಲ್ಲಿ ವಿನಿಯೋಗಿಸಲಾಗುತ್ತಿದೆ.

ಇಂತಹ ಕಾರ್ಯಕ್ರಮಗಳಿಗಾಗಿ ವೆಚ್ಚವಾಗುವ ಹಣ ಎಲ್ಲೆಡೆಯೂ ಸೋರಿ ಹೋಗುತ್ತಿದೆ ಎಂದರ್ಥವಲ್ಲ. ಸಾಕ್ಷರತೆಯಲ್ಲಿ ಮುಂದುವರಿದ ಜಿಲ್ಲೆಯಲ್ಲಿ ಇದು ಸಾರ್ಥಕವಾಗಬಹುದು. ಶೇಕಡಾ 70ರಷ್ಟು ಸಾಕ್ಷರತೆಯುಳ್ಳ ಕೇರಳ ರಾಜ್ಯದಲ್ಲಿ ಇದು ಜಯಪ್ರದವಾಗಿದೆ. ಎಂದು ತಜ್ಞರು ಹೇಳುತ್ತಾರೆ.

ಉತ್ತರ ಭಾರತದ ಬಹುಭಾಗ ಶೈಕ್ಷಣಿಕವಾಗಿ ಹಿಂದುಳಿದಿದೆ. ಆ ರಾಜ್ಯಗಳಲ್ಲಿ ಸಾಕ್ಷರರ ಸಂಖ್ಯೆ ಈಗಲೂ ಶೇಕಡಾ 30-35. ಆದರಲ್ಲೂ ಸಾಕ್ಷರ ಹೆಣ್ಣು ಮಕ್ಕಳ ಸಂಖ್ಯೆ ಶೇಕಡಾ 20. ಇಂತಹ ವಾತಾವರಣದಲ್ಲಿ ನಾಲ್ಕಾರು ತಿಂಗಳ ಕ್ಷಿಪ್ರಕಾರ್ಯಕ್ರಮ (T L E.)ದಿಂದ ಸರ್ವರನ್ನು ಸಾಕ್ಷರರನ್ನಾಗಿಸುವುದು ಬರೀನಾಟಕ.

ದೇಶ ಸ್ವತಂತ್ರವಾದಂದಿನಿಂದ, ಸಂವಿಧಾನದ ನಿರ್ದೇಶನದಂತೆ ಪ್ರಾಥಮಿಕ ಶಿಕ್ಷಣವನ್ನು ಕಡ್ಡಾಯಗೊಳಿಸಿ ಪ್ರಾಮಾಣಿಕವಾಗಿ ಪ್ರಯತ್ನಿಸುತ್ತಿದ್ದರೆ ಇಂದು ನಿರಕ್ಷರರ ಸಮಸ್ಯೆ ಇರುತ್ತಿರಲಿಲ್ಲ. ವಯಸ್ಕರ ಶಿಕ್ಷಣ ಖಾತೆಗಾಗಿ ಕೋಟ್ಯವಧಿರೂಪಾಯಿ ವೆಚ್ಚಮಾಡುವುದೇ ಬೇಡವೆಂದಾಗುತ್ತಿತ್ತು. ಈಗಲಾದರೂ ನಮ್ಮ ಧುರೀಣರು ಎಚ್ಚೆತ್ತು ಕಾರ್ಯಪ್ರವೃತ್ತರಾದರೆ, 20-30 ವರ್ಷಗಳಲ್ಲಾದರೂ ಈ ನಿರಕ್ಷರತೆ ಸಮಸ್ಯೆಯಾಗಿ ಉಳಿಯಲಾರದು.

**ದಾರಿತಪ್ಪಿದ ಉಚ್ಚಶಿಕ್ಷಣ :–** ಸರ್ಕಾರಿ ಅನುದಾನದ ಸಿಂಹಪಾಲನ್ನು ಪಡೆದುಕೊಳ್ಳುವ ಉಚ್ಚಶಿಕ್ಷಣ ಸಂಸ್ಥೆಗಳಾದರೂ ವಿದ್ಯಾರ್ಥಿಗಳಿಗೆ ಸಾರ್ಥಕ ಶಿಕ್ಷಣವನ್ನೊದಗಿಸಿವೆಯೇ ? ಅದೂ ಸಂಶಯಾಸ್ಪದ. ಬಹುಮಟ್ಟಿಗೆ ಸೋತೂ ಹೋಗಿದೆ. ಪರಿಣಾಮವಾಗಿ ವಿದ್ಯಾವಂತರೆನಿಸಿಕೊಂಡ ಸಾಮಾನ್ಯ ಮೂರು ಕೋಟಿ ಯುವಕರು ನಿರುದ್ಯೋಗಿಗಳಾಗಿದ್ದಾರೆ. ದೇಶಕ್ಕೆ ಭಾರವಾಗಿದ್ದಾರೆ. ಅವರಲ್ಲಿ ಕೆಲವರು ಆತಂಕವಾದಿಗಳ ದಾರಿ ಹಿಡಿದು ಗೂಂಡಾಗಿರಿ ನಡೆಸುತ್ತಿದ್ದಾರೆ.

ಇದಕ್ಕೆ ಪ್ರಮುಖ ಕಾರಣ ಉಚ್ಚ ಶಿಕ್ಷಣಕ್ಕೆ ಆಯ್ಕೆಗೊಳ್ಳುವ ಹೆಚ್ಚಿನ ವಿದ್ಯಾರ್ಥಿಗಳಲ್ಲಿ ಅರ್ಹತೆ ಮತ್ತು ಆಸಕ್ತಿಯ ಅಭಾವ. ಈ ಪವಿತ್ರ ಕ್ಷೇತ್ರದಲ್ಲಿಯೂ ಜ್ಯಾತ್ಯಾಧಾರಿತ ಮೀಸಲಾತಿ ಜ್ಯಾರಿಯಲ್ಲಿದೆ-ಅದು ಸಹ ಜಾತ್ಯತೀತವೆಂದು ಸಾರಿ-ಕೊಳ್ಳುವ ರಾಷ್ಟ್ರದಲ್ಲಿ ! ಸಾಕಷ್ಟು ಪ್ರತಿಭೆ, ಪೂರ್ವಸಿದ್ಧತೆ, ಆಸಕ್ತಿ ಇಲ್ಲದ ವಿದ್ಯಾರ್ಥಿಗಳು ಉಚ್ಚಮಟ್ಟದ ವೈಜ್ಞಾನಿಕ ಮತ್ತು ತಾಂತ್ರಿಕ ಶಿಕ್ಷಣದ ಸೂಕ್ಷ್ಮ ವಿಚಾರಗಳನ್ನು ಅರ್ಥಮಾಡಿಕೊಳ್ಳಲು ಸಮರ್ಥರಾಗಿರುವುದಿಲ್ಲ. ಆಗ ತಮ್ಮ ನ್ಯೂನತೆಯನ್ನು ಮರೆಮಾಡಲು ಪ್ರಾಧ್ಯಾಪಕರ ಮೇಲೆ ಇಲ್ಲ ಸಲ್ಲದ ಆರೋಪ, ಕೆಲವೇಳೆ ಹಲ್ಲೆಮಾಡಲೂ ಸಿದ್ಧರಾಗುತ್ತಾರೆ.

ದೇಶದ ಹೆಚ್ಚಿನ ವಿಶ್ವವಿದ್ಯಾಲಯಗಳಲ್ಲಿ ವರ್ಷದ ನಾಲ್ಕೈದು ತಿಂಗಳು ಸಹ ಪಾಠ ಪ್ರವಚನ ಅಥವಾ ಸಂಶೋಧನೆ ನಡೆಯುತ್ತಿಲ್ಲ. ಪ್ರಾಧ್ಯಾಪಕರಲ್ಲೂ ಕೆಲವರು ತಮ್ಮ ಶಿಕ್ಷಣ ಕಾರ್ಯವನ್ನು ಬಿಟ್ಟು ಉಳಿದೆಲ್ಲ ರಾಜಕೀಯ ನಡೆಸುತ್ತಾರೆ. ಪ್ರತಿಫಲವಾಗಿ ಪ್ರಯೋಜನಕ್ಕೆ ಬಾರದ ಪದವೀಧರರು ಹೊರಬರುತ್ತಾರೆ. ಸಾಕ್ಷರರು ದಾರಿ ತಪ್ಪಿದರೆ ರಾಕ್ಷಸ (ಸಾಕ್ಷರxರಾಕ್ಷಸಾ) ರಾಗುತ್ತಾರೆ. ಎಂಬ ಸುಭಾಷಿತ ದೇಶದಲ್ಲಿ ಹೆಚ್ಚಿನಂಶ ಸತ್ಯವಾಗಿದೆ.

ಇಂತಹ ವಿಷಮ ವಾತಾವರಣ ನಮ್ಮ ವಿಶ್ವವಿದ್ಯಾಲಯಗಳಲ್ಲಿರುವಾಗ ದೇಶದ ಪ್ರತಿಭಾವಂತ ವಿದ್ಯಾರ್ಥಿಗಳು ಅಮೇರಿಕಾಕ್ಕೋ, ಯೂರೋಪಿಗೋ ಹೋಗಿ ಉಚ್ಚ ಶಿಕ್ಷಣಗಳಿಸುತ್ತಾರೆ. ಹೆಚ್ಚಿನವರು ಅಲ್ಲೇ ಉತ್ತಮ ಉದ್ಯೋಗ ಪಡೆದು ಆದೇಶಗಳ ಸಂಪದಭಿವೃದ್ಧಿಗಾಗಿ ದುಡಿಯುತ್ತಾರೆ. ಆಕರ್ಷಕ ವೇತನ ಪಡೆದು ತಮ್ಮ ವೈಯಕ್ತಿಕ ಪ್ರಗತಿಯನ್ನು ಸಾಧಿಸಿಕೊಳ್ಳುತ್ತಾರೆ. ಹೀಗಾಗಿ ಇಲ್ಲಿ ದೇಶದ ಪ್ರತಿಭಾವಂತ ಯುವಕ ಯುವತಿಯರಿಗೆ ಉಚ್ಚ ಶಿಕ್ಷಣ ಮತ್ತು ಉದ್ಯೋಗ ಎರಡರಲ್ಲೂ ಅವಕಾಶ ವಿಲ್ಲವಾಗಿದೆ. ನಮ್ಮ ದೇಶದ ಪ್ರಗತಿ ಕುಂಠಿತವಾಗುವುದಕ್ಕೆ ಇದು ಸಹ ಒಂದು ಪ್ರಮುಖ ಕಾರಣವಾಗಿದೆ ಎಂದು ತಜ್ಞರು ಸಾರಿದ್ದಾರೆ. ನಮ್ಮಧುರೀಣರು ಪ್ರತಿಭಾ-ಪಲಾಯನ (Braine Drain) ಆಗುತ್ತಿದೆ ಎಂದು ಮೊಸಳೆ ಕಣ್ಣೀರು ಮಾತ್ರ ಸುರಿಸುತ್ತಾರೆ.

ಹೀಗೆ ಶಿಕ್ಷಣ ಕ್ಷೇತ್ರ ದೊಡ್ಡ ಕುರುಕ್ಷೇತ್ರವಾಗಿದೆ. ಇವನ್ನೆಲ್ಲ ಸರಿಪಡಿಸದಿದ್ದರೆ "ಮೇರಾಭಾರತ್ ಮಹಾನ್" ಎಂಬುದು ಬರೇಪೊಳ್ಳು ಘೋಷಣೆಯಾಗುತ್ತದೆ.

**ಕರಿಮೋಡದಲ್ಲಿ ಬೆಳ್ಳಿಯ ರೇಖೆ :** ಇತ್ತೀಚೆ ನಮ್ಮ ಸಮಾಜದ ಹಿತಚಿಂತಕ ಧುರೀಣರು ಶಿಕ್ಷಣ ಕ್ಷೇತ್ರ ದಾರಿತಪ್ಪಿದ್ದನ್ನು ಅರಿತುಕೊಂಡಿದ್ದಾರೆ, ಆ ನ್ಯೂನತೆಗಳನ್ನು ಸರಿಪಡಿಸಲಿಕ್ಕಾಗಿ ಖಾಸಗೀ ಶಾಲಾ ಕಾಲೇಜುಗಳನ್ನು ದೇಶಾದ್ಯಂತ ಆರಂಭಿಸಿದ್ದಾರೆ.

ಬಡ ವಿದ್ಯಾರ್ಥಿಗಳ ಪಾಲನೆ ಪೋಷಣೆಗಾಗಿ ಉಚಿತ ವಿದ್ಯಾರ್ಥಿ ನಿಲಯಗಳನ್ನು ನಡೆಸುತ್ತಿದ್ದಾರೆ.

ಇದಲ್ಲದೆ, ಉಚ್ಚಮಟ್ಟದ ವೈದ್ಯಕೀಯ ಮತ್ತು ತಾಂತ್ರಿಕ ಶಿಕ್ಷಣ ಸಂಸ್ಥೆಗಳನ್ನು ಕಟ್ಟಿಬೆಳೆಸಿದ್ದಾರೆ ಆ ದಿಸೆಯಲ್ಲಿ ಕರ್ನಾಟಕ ರಾಜ್ಯ ಮುಂಚೂಣಿಯಲ್ಲಿದ್ದು ಅದ್ಭುತ ಜಯಗಳಿಸಿದೆ. ದೇಶದ ಬೇರೆ ಬೇರೆ ರಾಜ್ಯಗಳಿಂದ ಮಾತ್ರವಲ್ಲದೆ ವಿದೇಶಗಳ ಸಾವಿರಾರು ಪ್ರತಿಭಾವಂತ ವಿದ್ಯಾರ್ಥಿಗಳನ್ನು ಈ ಸಂಸ್ಥೆಗಳು ಆಕರ್ಷಿಸುತ್ತಿವೆ. ಈ ದಿಸೆಯಲ್ಲಿ ಮಣಿಪಾಲದಲ್ಲಿ ಉತ್ತಮ ಮಟ್ಟದ ಉಚ್ಚಶಿಕ್ಷಣ ಕೇಂದ್ರವನ್ನಾರಂಭಿಸಿದ ಡಾ|| ಟಿ. ಮಾಧವಪೈಗಳು ಮೊದಲಿಗರು. ಅವರ ಅತ್ಯದ್ಭುತ ಸಾಧನೆ ಚಿರಸ್ಮರಣೀಯ.

ಶಿಕ್ಷಣ ಕ್ಷೇತ್ರ, ಆ ಮೂಲಕ ರಾಷ್ಟ್ರ ಸಹ ಅವನತಿಯ ದಾರಿಯಲ್ಲಿ ಜಾರತೊಡಗಿದಾಗ ಕರ್ನಾಟಕದ ಪ್ರಗತಿಶೀಲ ಧಾರ್ಮಿಕ ಸಂಸ್ಥೆಗಳವರು ಸಹ ಮುಂದೆ ಬಂದರು. ದೊಡ್ಡ ಮಠಾಧಿಪತಿಗಳು ಹೊಸ ವೃತ್ತಿ ಶಿಕ್ಷಣ ಸಂಸ್ಥೆ' ವೈದ್ಯಕೀಯ ಮತ್ತು ತಾಂತ್ರಿಕ ಶಿಕ್ಷಣವೀಯುವ ಬೃಹತ್ ಸಂಸ್ಥೆಗಳನ್ನು ಆಕರ್ಷಕ ರೀತಿಯಲ್ಲಿ ಕಟ್ಟಿ ಬೆಳೆಸಲಾರಂಭಿಸಿದರು. ಹೀಗೆ ದೇಶದಲ್ಲಿ ಧರ್ಮಗ್ಲಾನಿ ಮಿತಿ ಮೀರಿದಾಗ ತಾನು ಅವತರಿಸಿ ಪ್ರಜೆಗಳ ಯೋಗಕ್ಷೇಮವನ್ನು ನಿರ್ವಹಿಸುತ್ತೇನೆ ಎಂದು ಶ್ರೀ ಕೃಷ್ಣ ಗೀತೋಪದೇಶದಲ್ಲಿ ಹೇಳಿದಂತಾಗುತ್ತಿದೆ.

ಈ ತರದಲ್ಲಿ ಮೈಸೂರು, ಧರ್ಮಸ್ಥಳ, ತುಮಕೂರು, ಬೆಂಗಳೂರು, ದಾವಣಗೆರೆ, ಗುಲ್ಬರ್ಗಾ ಮುಂತಾದ ಮಹಾನಗರಗಳಲ್ಲಿ ಆರಂಭಗೊಂಡ ಪ್ರಮುಖ ಶಿಕ್ಷಣ ಕೇಂದ್ರಗಳು ದೇಶದ ಯುವಕ ಯುವತಿಯರಿಗೆ ಉತ್ತಮ ಶಿಕ್ಷಣವನ್ನಿತ್ತು ಅವರ ಬಾಳಿಗೆ ಬೆಳಕು ಬೀರುತ್ತಿವೆ.

ಕರ್ನಾಟಕದ ಈ ಸಾಧನೆಯನ್ನನುಸರಿಸಿ ಖಾಸಗೀ ಉಚ್ಚ ಶಿಕ್ಷಣ ಕೇಂದ್ರಗಳು ತಮಿಳುನಾಡು, ಮಹಾರಾಷ್ಟ್ರ, ಆಂಧ್ರ ಮೊದಲಾದ ರಾಜ್ಯಗಳಲ್ಲೂ ಆರಂಭಿಸಲ್ಪಟ್ಟು ಬೆಳೆಯುತ್ತಿವೆ. ಇದು ಸಂತೃಪ್ತಿ ತರುವ ವಿಚಾರವಲ್ಲವೆ? ಒಂದು ವೇಳೆ ಖಾಸಗೀ ಸಂಸ್ಥೆಯಲ್ಲಿ ಮೋಸ ನಡೆದರೆ ಸರ್ಕಾರಕ್ಕೆ ಕಡಿವಾಣ ಹಾಕುವ ಅಧಿಕಾರ ಇದ್ದೇ ಇದೆಯಲ್ಲವೆ? ಅಂತು ನಮ್ಮ ಶಿಕ್ಷಣಕ್ಷೇತ್ರ ಕುರುಕ್ಷೇತ್ರವಾಗುವ ಬದಲು ಕರ್ಮಕ್ಷೇತ್ರ ಅಥವಾ ಧರ್ಮಕ್ಷೇತ್ರವಾಗುತ್ತಿರುವುದು ಪ್ರಜೆಗಳ ಪುಣ್ಯವಲ್ಲವೆ? ಇದು ಸಮೃದ್ಧವಾಗಿ ಬೆಳೆದು ಬರಲೆಂದು ಹಾರೈಸುವ.

# ಬದಲಾಗುತ್ತಿರುವ ಮೌಲ್ಯಗಳು

—ಗೋಪಾಲ ಆಶ್ರಿತ, ಜವಾಹರನಗರ, ರಾಯಚೂರು.

ನಾನು ಆರನೇ ವರ್ಗದಲ್ಲಿದ್ದಾಗ ನನ್ನ ಜೇಬಿನಲ್ಲಿ ಒಂದು ಚಿಕ್ಕ ಬಾಚಣಿಗೆ ಇಟ್ಟುಕೊಂಡಿದ್ದು ನನ್ನ ಗುರುಗಳ ಕಣ್ಣಿಗೆ ಬಿತ್ತು. ಅವರು ಕೂಡಲೇ ಎದ್ದು ಬಂದು ಆ ಬಾಚಣಿಗೆಯನ್ನು ಕಿತ್ತುಕೊಂಡು, ಮುರಿದು, ಹೊರಗೆ ಒಗೆದರಲ್ಲದೆ, ನನ್ನ ಕಿವಿ ಹಿಂಡಿದರು; ಕೆನ್ನೆಗೆ ನಾಲ್ಕು ಏಟು ಬಿಗಿದರು. ಮುಂದೆ ಸುಮಾರು ಹನ್ನೆರಡು ವರ್ಷಗಳ ನಂತರ ನಾನು ಪ್ರೌಢಶಾಲೆಯೊಂದರಲ್ಲಿ ಶಿಕ್ಷಕನಾಗಿ ನೇಮಕಗೊಂಡೆ. ಒಂದು ದಿನ ಶಾಲೆಯ ಮುಖ್ಯೋಪಾಧ್ಯಾಯರು ವಿದ್ಯಾರ್ಥಿಗಳಿಗೆ ಸ್ವಚ್ಛತೆ, ಶಿಸ್ತಿನ, ಬಗ್ಗೆ ಉಪದೇಶಿಸುತ್ತ "ನೀವೆಲ್ಲಾ ಯಾವಾಗಲು Clean ಆಗಿರಬೇಕು. ಜೇಬಿನಲ್ಲಿ ಒಂದು ಬಾಚಣಿಗೆ, ಕರವಸ್ತ್ರ ಇಟ್ಟುಕೊಂಡಿರಬೇಕು" ಎಂದು ಹೇಳಿದರು, ಅವರ ಮಾತು ಕೇಳುತ್ತಿದ್ದಂತೆ ನನಗೆ ನನ್ನ ಆರನೇ ಕ್ಲಾಸಿನಲ್ಲಿದ್ದಾಗಿನ ಬಾಚಣಿಗೆ ಘಟನೆ ನೆನಪಾಯಿತು. ಈ ಘಟನೆ ನೆನೆಪಾದಾಗಲೆಲ್ಲ, ಹತ್ತು ಹನ್ನೆರಡು ವರ್ಷಗಳ ಅವಧಿ ನಿಮ್ಮ ದೃಷ್ಟಿ ಕೋನದಲ್ಲಿ ಇಷ್ಟೊಂದು ಬದಲಾವಣೆಯಾಗಲು ಸಾಧ್ಯವೆ? ಇದನ್ನೇ Generation Gap ಅನ್ನುತ್ತಾರೆಯೆ? ಎಂದು ನನ್ನನ್ನೇ ಪ್ರಶ್ನಿಸಿ ಕೊಂಡಿದ್ದೇನೆ. ನಮ್ಮ ಜೀವನ ಅಂದು ಇಂದು ಅಂಥ ಲೇಖನಗಳನ್ನು ಓದಿದ್ದುಂಟು. ಅನೇಕ ಹಿರಿಯರು (ಹಿಂದಿನ ಪೀಳಿಗೆಯವರು) "ನಮ್ಮ ಕಾಲದಲ್ಲಿ ಹೀಗಿರಲಿಲ್ಲ" ಎನ್ನುತ್ತ ಪ್ರಸಕ್ತ ವ್ಯವಸ್ಥೆಯನ್ನು ಕಟುವಾಗಿ ವಿಮರ್ಶಿಸುವುದನ್ನು ಕೇಳಿದ್ದೇನೆ. ಅವರ ವಾದವನ್ನು ಸಂಪೂರ್ಣವಾಗಿ ಒಪ್ಪದಿದ್ದರೂ, ಆ ದಿಶೆಯಲ್ಲಿ ಯೋಚಿಸುತ್ತಿರುತ್ತೇನೆ.

ಇಂದು ಹೆಚ್ಚು ಕಡಿಮೆ ಎಲ್ಲ ಕ್ಷೇತ್ರಗಳಲ್ಲೂ ರಭಸದ ಬದಲಾವಣೆ ಕಾಣುತ್ತಿದ್ದೇವೆ ಸಾರಿಗೆ, ವಿಜ್ಞಾನ, ವೈದ್ಯಕೀಯ, ಉದ್ಯಮ, ಶಿಕ್ಷಣ, ಕಲೆ ಮುಂತಾದ ಕ್ಷೇತ್ರಗಳಲ್ಲಿ ಕ್ರಾಂತಿ-ಕಾರಿ ಬದಲಾವಣೆಯಾಗುತ್ತಿದೆ. ಹೊಸ ಅಲೆಯ ಹೆಸರಿನಲ್ಲಿಯೇ ಕೆಲವೊಂದು ಬದಲಾವಣೆಗಳು ನಡೆದಿವೆ. ಇದಕ್ಕೆ ಕಾರಣ ಪಶ್ಚಿಮದ ಪ್ರಭಾವ ವಿರಬಹುದು. ಅದರ ಅನುಕರಣೆಯೇ ನಮ್ಮ ನರನಾಡಿಗಳಲ್ಲಿ ಪ್ರವಹಿಸುತ್ತಿದೆ. ಅದನ್ನೇ ಹೊಸ ವಿಚಾರಧಾರೆಯೆಂದು ಕರೆಯುತ್ತಿದ್ದೇವೆನಿಸುತ್ತದೆ.

ನನ್ನ ಹತ್ತಿರದ ಬಂಧುಗಳೊಬ್ಬ ಆಯುರ್ವೇದದ ವೈದ್ಯರಾಗಿ ಸಾಕಷ್ಟು ಪ್ರಸಿದ್ಧರಾಗಿದ್ದಾರೆ. ಅವರು ನನ್ನ ಮನೆಗೆ ಬಂದಾಗ ನನ್ನ ತಂಗಿಯ ಮುಖದ ಮೇಲಿನ

ಮೊಡವೆಗಳನ್ನು ನೋಡಿ "ಪ್ರತಿದಿನ ಸ್ನಾನ ಮಾಡುವ ಮೊದಲು ಒಂದು ಚಮಚ ಎಣ್ಣೆಯಲ್ಲಿ ಸ್ವಲ್ಪ ಅರಿಷಿಣ ಪುಡಿ ಬೆರೆಸಿ ಬಟ್ಟೆನಿಂದ ತಿಕ್ಕಿಕೊಳ್ಳು. ಒಂದು ತಿಂಗಳಲ್ಲಿಯೇ ಈ ಮೊಡವೆಗಳು ಮಾಯವಾಗುತ್ತವೆ," ಎಂದು ಹೇಳಿದರು. ಈ ಸಲಹೆಯಿಂದ ನನ್ನ ತಂಗಿ ಪ್ರಭಾವಿತಳಾಗಲಿಲ್ಲ. ಆದರೆ ಮುಂದೆ ಕೆಲವೇ ದಿನಗಳ ನಂತರ ಪೇಟೆಯಲ್ಲಿ ಹೊಸದಾಗಿ ಬಂದಿದ್ದ Vicco-Turmeric paste ಹಚ್ಚಿಕೊಳ್ಳಲು ಪ್ರಾರಂಭಿಸಿದಳು. ಆದರೆ ಈ Paste ನಲ್ಲಿ, ಆ ವೈದ್ಯ ಹೇಳಿದ ಸೂತ್ರವನ್ನೇ ಬಳಸಲಾಗುತ್ತೆಂಬುದು ಅವಳಿಗೆ ನಂತರ ತಿಳಿಯಿತು. ಎಂತಲೇ ಇಂದಿನ ಅನೇಕ ಔಷಧಿಗಳು ಆಯುರ್ವೇದ ಅಥವಾ ಯುನಾನಿ ತಯಾರಿಕೆಗಳಾಗಿದ್ದರೂ ಅವುಗಳನ್ನು Capsule ರೂಪದಲ್ಲಿ ಹೊಸ ಹೊದಿಕೆಯೊಂದಿಗೆ (T. V. ಮತ್ತು ಇತರ ಮಾಧ್ಯಮಗಳಲ್ಲಿ Herbal ಎಂದು ಪ್ರಚಾರ ಪಡೆದುಕೊಂಡು) ಮಾರು ಕಟ್ಟೆಗೆ ಬಂದಿವೆ. ತಜ್ಞ ವೈದ್ಯರು ಬರೆದುಕೊಟ್ಟಾಗ ಮಾತ್ರ ರೋಗಿಗಳು ಹೆಚ್ಚು ಹಣ ತೆತ್ತು ಖರೀದಿಸುತ್ತಾರೆ. ಹಳೆಯ ಔಷಧ ಹೊಸ ರೂಪ ತಾಳಿದಾಗ (Old wine in new bottel ಎನ್ನುವಂತೆ] ಅದಕ್ಕೆ " ಬೆಲೆ " ಬರುತ್ತದೆಂಬುದು ತಯಾರಿಕರಿಗೂ ವೈದ್ಯರಿಗೂ ತಿಳಿದ ವಿಷಯ.

ಇದು Fashion ಯುಗ. ಬಣ್ಣ ಬಣ್ಣದ ಬಟ್ಟೆಗಳನ್ನು ಹಾಕಿಕೊಂಡು ಚೆನ್ನಾಗಿ ಕಾಣಬೇಕೆಂಬುದೇ ಎಲ್ಲರ ಹಂಬಲ. ತರುಣ ತರುಣಿಯರಂತೂ ಇದರ ಸೆಳೆತಕ್ಕೆ ಸಹಜವಾಗಿ ಆಕರ್ಷಿತರಾಗುತ್ತಾರೆ. ಆದರೆ ಹಿಂದಿನ ಕಾಲದಲ್ಲಿದಂತೆ, ಸಭ್ಯತೆಯ ಸೀಮಾರೇಖೆಯೆಂಬುದು ಇಂದು ಉಳಿದಿಲ್ಲ. ಈಗ ಬಟ್ಟೆ ಹಾಕಿಕೊಳ್ಳುವುದಕ್ಕಿಂತ ಅಂಗಾಂಗ ಪ್ರದರ್ಶನವೇ ಮುಖ್ಯವೆನಿಸುವಷ್ಟರ ಮಟ್ಟಿಗೆ Fashion ಮುಂದುವರಿದಿದೆ. see through ಸೀರೆಯುಟ್ಟಿದ್ದ ಪ್ರೇಯಸಿಯೊಡನೆ ಮಾತಾಡುತ್ತ ನನ್ನ ಗೆಳೆಯ "Dose this saree hide some parts or expose them very beautifully"? ಎಂದು ಕೇಳಿದ್ದ, ಈಗಲೂ ಅವನ ವಾದವಿಷ್ಟೆ. ಪೋಷಾಕುಗಳನ್ನು ನಾವು ಧರಿಸಬೇಕು; ಅವು ನಮ್ಮನ್ನಲ್ಲ. ಈ ತೆರನಾದ Fashion ಬದಲಾವಣೆಗೆ ಸಿನಿಮಾಗಳೇ ಕಾರಣವೆಂದು ಹೇಳಬಹುದು. ಚಿತ್ರಗಳಲ್ಲಿ ಕಾಣುವ ಥಳುಕಿನ ಜೀವನ ಅಥವಾ ನಟ-ನಟಿಯರ ಥಳುಕಿನ ಜೀವನ ಯುವಕರ ಮೇಲೆ ವಿಶೇಷ ಪರಿಣಾಮ ಬೀರಿ, ಆ ಜೀವನವನ್ನು ಅನುಕರಿಸುವ ಕನಸು ಕಾಣುವಂತೆ ಮಾಡಿವೆ. ಇದೆಲ್ಲ ನನಸಾಗದ ಕನಸೆಂಬುದು ಈ ಯುವಕರಿಗೆ ಮನವರಿಕೆಯಾಗುತ್ತಿಲ್ಲ.

ಸಿನೆಮಾದ ವಿಷಯವಾಗಿ ಬರೆಯುತ್ತಿದ್ದಂತೆ ಇತ್ತೀಚೆಗೆ ನಡೆದ ಒಂದು ಘಟನೆ ನೆನಪಿಗೆ ಬರುತ್ತದೆ. ನಮ್ಮ ಕಾಲೇಜಿನಲ್ಲಿ ಯುವ ಮೇಳ ನಡೆಯಿತು. ಇದರಲ್ಲಿ

ಬೇರೆ ಬೇರೆ ಜಿಲ್ಲೆಗಳಿಂದ ವಿದ್ಯಾರ್ಥಿ ವಿದ್ಯಾರ್ಥಿನಿಯರು ಪಾಲ್ಗೊಳ್ಳಲು ಬಂದಿದ್ದರು. ಚಿತ್ರಗೀತೆಗಳ ಸ್ಪರ್ಧೆಗೆ ನಮ್ಮ ಕಾಲೇಜಿನ ಹಳೆಯ ವಿದ್ಯಾರ್ಥಿಗಳಿಬ್ಬರು ನಿರ್ಣಾಯಕರಾಗಿ ಬಂದಿದ್ದರು. ಸುಮಾರು ಇಪ್ಪತ್ತು ವರ್ಷಗಳ ಹಿಂದೆ ಅವರು ಕೂಡಾ ಇಂಥ ಸ್ಪರ್ಧೆಗಳಲ್ಲಿ ಭಾಗವಹಿಸಿ ಪ್ರಶಸ್ತಿ ಪಡೆದಿದ್ದರು. ನಾನು ಅವರೊಡನೆ ಚರ್ಚಿಸುತ್ತ "ಅಂದು ಮತ್ತು ಇಂದಿನ ಚಿತ್ರ ಸಂಗೀತದಲ್ಲಿ ಬದಲಾವಣೆಯಾಗಿದೆಯೆಂದು ನಿಮಗನಿಸುತ್ತದೆಯೆ ?" ಎಂದು ಕೇಳಿದೆ. ಅವರು ಹೇಳಿದ್ದು ಇಷ್ಟೆ: "ಸರ್, ಆಗ ಹಾಡು ಪ್ರಮುಖ ಪಾತ್ರವಹಿಸುತ್ತಿತ್ತು. ಹಾಡುವ ಕಲಾಕಾರ Hero ಆಗಿರುತ್ತಿದ್ದ. ವಾದ್ಯಗಳು ಹಿಮ್ಮೇಳದಲ್ಲಿರುತ್ತಿದ್ದವು. ಈಗ ವಾದ್ಯಗಳದೇ ಅಬ್ಬರ ಜಾಸ್ತಿಯಾಗಿದೆ. We are just Drum beaters. ಈ ಡ್ರಮ್ಮುಗಳ ಬೀಟಿನಲ್ಲಿ ಹಾಡುಗಾರ ಕಾಣೆಯಾಗಿದ್ದಾನೆ; ಕರಗಿ ಹೋಗಿದ್ದಾನೆ" ಎಂದರು.

ನಮ್ಮ ದೇಶದ ಹಿರಿಮೆ ಹಾಗೂ ಸಂಸ್ಕೃತಿ, ಕಲೆಯ ಬಗ್ಗೆ ಅನೇಕ ಚರಿತ್ರಕಾರರು ಲೇಖಕರು ಗ್ರಂಥಗಳನ್ನೇ ಬರೆದಿದ್ದಾರೆ. ಬುದ್ಧ, ಮಹಾವೀರ, ಮಹಾತ್ಮಗಾಂಧಿ, ರಾಮಕೃಷ್ಣ ಪರಮಹಂಸ, ಸ್ವಾಮಿ ವಿವೇಕಾನಂದ ರಂಥ ಪುಣ್ಯಾತ್ಮರು ಜನಿಸಿದ ನಾಡೆಂದು ಭಾರತಕ್ಕೆ ಅಧ್ಯಯನ ಮಾಡಲು ವಿದೇಶದಿಂದ ಜನರು ಈಗಲು ಬರುತ್ತಾರೆ. ಕೆಲವರಾದರೂ ಈ ದೇಶವನ್ನೇ ತಮ್ಮ ಕರ್ಮ ಭೂಮಿಯನ್ನಾಗಿ ಮಾಡಿಕೊಳ್ಳುತ್ತಾರೆ. ತಮ್ಮ ಅನುಭಗಳನ್ನು ಬರೆದು ಪ್ರಕಟಿಸುತ್ತಾರೆ. ಆದರೆ ಇತ್ತೀಚೆಗೆ ಸಾಹಿತ್ಯ ಕ್ಷೇತ್ರದಲ್ಲಿ ಒಂದು ಹೊಸ ಅಲೆ ಎದ್ದಿದೆ. ನಮ್ಮ ದೇಶ, ಧರ್ಮ, ನಮ್ಮ ಆಚಾರ ವಿಚಾರಗಳನ್ನು ಖಂಡಿಸಿ ಬರೆಯುವುದೇ 'ಪ್ರಗತಿಪರ ಲೇಖಕ'ನ ಲಕ್ಷಣವಾಗಿದೆ. ಭಾರತದಲ್ಲಿನ ಬಡತನ, ನಿರುದ್ಯೋಗ, ಅಂಧಶ್ರದ್ಧೆ ಪರದೇಶದಿಂದ ಪಡೆಯುತ್ತಿರುವ ಸಾಲ ಮುಂತಾದ ಅಂಶಗಳನ್ನು ವಿಮರ್ಶಿಸಿ ಬರೆದು ಕೆಲವು ಲೇಖಕರು ಮುಂದೆ ಬಂದಿದ್ದಾರೆ. ಇಂಥ 'ಪ್ರಗತಿಪರ' ಬುದ್ಧಿ ಜೀವಿಗಳಿಗೆ ಮಾಧ್ಯಮದಲ್ಲೂ ಸಾಕಷ್ಟು ಪ್ರಚಾರ ಸಿಗುತ್ತಿದೆ. ಯಾವದೇ ಜಾತಿ ಅಥವಾ ಧರ್ಮದ ಬಗ್ಗೆ ವಿವಾದಾಸ್ಪದ ಲೇಖನ ಅಥವಾ ಗ್ರಂಥ ಬರೆದರೆ ಪ್ರಚಾರ ಮಾತ್ರವಲ್ಲದೆ, ಸಾಕಷ್ಟು ಹಣ ಮಾಡಿಕೊಳ್ಳಲೂ ಬಹುದು.

ರಾಜಕಾರಣದಲ್ಲಿ ಸೇವಾಭಾವ, ಪ್ರಾಮಾಣಿಕತೆ ಎಂಬ ಶಬ್ದಗಳು ಅಪಮೌಲ್ಯಗೊಂಡಿವೆ ಅವು ಕೇವಲ ಮುಗ್ಧ ಜನರನ್ನು ನಂಬುವಂತೆ ಮಾಡಲು ಬಳಸುವ ಶಬ್ದಗಳಾಗಿವೆ. ಈ ಶಬ್ದಗಳ ಸಹಾಯದಿಂದ ರಾಜಕಾರಣಿ ತನ್ನ ಬೇಳೆ ಬೇಯಿಸಕೊಳ್ಳ ಬಹುದೆಂಬುದು ಸರ್ವವಿದಿತ. ಒಂದು ಕಾಲದಲ್ಲಿ ಜನನಾಯಕನೆಂದರೆ ದೇಶಕ್ಕಾಗಿ ಸರ್ವಸ್ವ ತ್ಯಾಗ ಮಾಡುವಂಥ ವ್ಯಕ್ತಿ, ಜನರ ಹಿತಕ್ಕಾಗಿ ದುಡಿಯುವ ವ್ಯಕ್ತಿ

ಯೆಂದು ಗುರುತಿಸಲಾಗುತ್ತಿತ್ತು. ಅಂಥ ನಾಯಕರನ್ನು ದೀನ ಬಂಧು ಎನ್ನುತ್ತಿದ್ದರು. ಇಂದು ಕೂಡಾ ಅಂಥ ಸೇವಾ ಮನೋಭಾವದ ಜನರಿದ್ದಾರೆ. ಆದರೆ ಅವರ ಸಂಖ್ಯೆ ಬೆರಳೆಣಿಕೆಯಲ್ಲಿ ಮಾತ್ರ. ಮತ್ತು ಅವರೆಲ್ಲ ರಾಜಕೀಯದಿಂದ ದೂರವಿದ್ದು ಕೆಲಸ ಮಾಡುವಂಥವರಾಗಿದ್ದಾರೆ. ಇಂದಿನ ರಾಜಕಾರಣಿ ಸ್ವಾರ್ಥಕ್ಕಾಗಿ, ತನ್ನ ಹಿಂಬಾಲಕರ ಏಳ್ಗೆಗಾಗಿ ದೇಶವನ್ನೇ ತ್ಯಾಗ ಮಾಡಲು ಹಿಂಜರಿಯುವುದಿಲ್ಲ. ರಾಜಕೀಯ ವೆಂಬುದು ಅಧಿಕಾರಕ್ಕಾಗಿ, ಹಣ ಮಾಡಿಕೊಳ್ಳಲಿಕ್ಕೆ ಸರಳ ಸಾಧನವಾಗಿದೆ; ವೃತ್ತಿಯಾಗಿದೆ. All is Fair in Love and War ಎಂಬ ನಾಣ್ಣುಡಿಗೆ ಈಗ 'Politics' ಎಂಬ ಶಬ್ದವನ್ನು ಸೇರಿಸಬೇಕಾಗಿದೆ. ಇಂದು ಚುನಾವಣೆ ಗೆಲ್ಲುವಲ್ಲಿ ಜನಪ್ರಿಯತೆ, ಜನ ಬಲಕ್ಕಿಂತ ಧನಬಲ ಪ್ರಮುಖ ಪಾತ್ರವಹಿಸುತ್ತಿದೆ. ಅಧಿಕಾರ ಪಡೆಯಲು ಈ ನಾಯಕರು ಏನು ಮಾಡಲೂ ಸಿದ್ಧರಿರುತ್ತಾರೆ.

ರಾಜಕಾರಣಕ್ಕೆ ಪೂರಕವೆಂಬಂತೆ ಕಚೇರಿಗಳಲ್ಲಿ ಸೇವಾಭಾವ ಕಡಿಮೆಯಾಗಿ 'ಲಂಚಾವತಾರ' ಬೃಹದಾಕಾರದ ಮಟ್ಟ ಮೀರುತ್ತಿದೆ. "Corruption is a Universal Phenomenon" ಎಂದು ಮಾಜಿ ಪ್ರಧಾನಿಯೊಬ್ಬರಿತ್ತ ಹೇಳಿಕೆ ಭ್ರಷ್ಟಾಚಾರಕ್ಕೆ ಮಾನ್ಯತೆ ನೀಡಿದಂತಾಗಿದೆ. ಒಂದು ಕಾಲದಲ್ಲಿ ಯಾವನಾದರೂ ಲಂಚಾ ತೆಗೆದು ಕೊಳ್ಳುತ್ತಾನೆಂದರೆ ಅವನನ್ನು ಇತರರು ಬಹಿಷ್ಕರಿಸುತ್ತಿದ್ದರು. ಅವನು ಕೂಡಾ ಬಹಳ ಸಂಕೋಚ ಪಟ್ಟುಕೊಳ್ಳುತ್ತ, ಯಾರೂ ಇಲ್ಲದ ಸಮಯದಲ್ಲಿ ಹಣ ಕೇಳಿ ಪಡೆಯುತ್ತಿದ್ದ. ಆದರೆ ಇಂದು ಕಾಣ ಬಹುದಾದ ದೃಶ್ಯ ಪೂರ್ಣ ವ್ಯತಿರಿಕ್ತ ವಾಗಿದೆ. ನೀವು ಯಾವುದೇ ಕಚೇರಿಗೆ ಹೋಗಿ ನಿಮ್ಮ ಕೆಲಸ ಮಾಡಿಸಿಕೊಳ್ಳ ಬೇಕಾದರೆ ಹಣತೆತ್ತು ಬರಬೇಕು. ಒಂದು ಮೇಜಿನಿಂದ ಇನ್ನೊಂದು ಮೇಜಿಗೆ ಕಾಗದ ಚಲಿಸಲು ದಕ್ಷಿಣೆ ನೀಡಬೇಕೆಂದು ಅವರೇ ನಿಸ್ಸಂಕೋಚವಾಗಿ ತಮ್ಮ 'ರೇಟು' ಹೇಳುತ್ತಾರೆ. ಇಂದು ಲಂಚ ತೆಗೆದು ಕೊಳ್ಳಲಾರದವನೇ ಪಾಪಿ. ಅವ-ನೊಬ್ಬ ನಿರುಪಯುಕ್ತ ಹಾಗೂ ಅದಕ್ಷ ವ್ಯಕ್ತಿಯೆಂದು ಪರಿಗಣಿಸಲಾಗುತ್ತದೆ. ಇಂಥ ವ್ಯಕ್ತಿಗಳನ್ನು ಯಾವ ಅಧಿಕಾರಿಯೂ ತನ್ನ ಕಚೇರಿಯಲ್ಲಿ ಇಟ್ಟು ಕೊಳ್ಳಲು ಸಿದ್ಧರಿರು ವುದಿಲ್ಲ. ಇಂಥವರನ್ನು ನೀರು ಸಿಗಲಾರದ ಹಳ್ಳಿಗೆ Punishment Transfer ಮಾಡಿ ಕಳಿಸಲಾಗುತ್ತದೆ. ಕೊಡು-ಕೊಳ್ಳುವ ಈ ವೃತ್ತಿಯಲ್ಲಿ ಪಳಗಿದಾಗ ಮಾತ್ರ ಇಂಥವರಿಗೆ ಬಡ್ತಿ ಸಿಗುತ್ತದೆ. 'ಫಲವತ್ತಾದ' ಪ್ರದೇಶಕ್ಕೆ ವರ್ಗವಾಗುತ್ತದೆ. ಈ ಭ್ರಷ್ಟಾಚಾರದ ಹಾವಳಿ ಗುಡಿ ಗುಂಡಾರಗಳಲ್ಲಿ ಶಿಕ್ಷಣ ಸಂಸ್ಥೆಗಳನ್ನು ಬಿಟ್ಟಿಲ್ಲ. ಹಣ ಚೆಲ್ಲಿದರೆ ಮಾತ್ರ ಇಲ್ಲೂ "ಪ್ರವೇಶ" ವುಂಟು.

ನಮ್ಮ ದೇಶದ ಜಾತ್ಯಾತೀತ ರಾಷ್ಟ್ರವೆಂದು ಸಂವಿಧಾನದಲ್ಲಿ ಬರೆಯಲಾಗಿದೆ. ಆದರೆ ನಾವು ಕಾಣುತ್ತಿರುವುದು ಮಾತ್ರ ಜಾತೀಯತೆ ಪ್ರತಿಯೊಂದು ಹಂತದಲ್ಲಿ

ನಮ್ಮ ಜಾತಿ ಉಪಜಾತಿಗಳನ್ನು ಕೇಳಲಾಗುತ್ತಿದೆ. ಇದರಿಂದಾಗಿ ಜಾತೀಯತೆಯ ಪಿಡುಗು ಎಲ್ಲೆಡೆ ಹರಡುತ್ತಿದೆ. ಇಂದು ಹೆಚ್ಚು ಕಡಿಮೆ ಎಲ್ಲ ಸಂಗಡದವರು "ಹಿಂದುಳಿದ ವರ್ಗ" ಎಂಬ ಚೌಕಟ್ಟಿನಲ್ಲಿ ಬರಲು ಪ್ರಯತ್ನಿಸುತ್ತಿದ್ದಾರೆ. Merit ಎಂಬುದು ಅರ್ಥಕಳೆದುಕೊಂಡಿದೆಯೆಂದೇ ಹೇಳಬಹುದು.

ಯಾವಾಗಲೂ ಮಹಿಳೆಯನ್ನು ಗೌರವಿಸುವ ದೇಶವೆಂದು ಭಾರತದ ಹೆಸರು ವಾಸಿಯಾಗಿದೆ. ಒಂದು ಕಾಲದಲ್ಲಿ ಮಹಿಳೆಗೆ ಶಿಕ್ಷಣದ ಸೌಲಭ್ಯ ಅನಗತ್ಯವೆಂದು ಭಾವಿಸಲಾಗಿದ್ದು ಅವಳ ಜಗತ್ತನ್ನು ನಾಲ್ಕು ಗೋಡೆಗಳಿಗೆ ಸೀಮಿತಗೊಳಿಸಲಾಗಿತ್ತು. ಆದರೆ ಇಂದು ಶಿಕ್ಷಣದ ಸೌಲಭ್ಯ ದೊರಕಿ ಅವಳು ಪುರುಷನಿಗೆ ಸರಿ ಸಮಾನಳೆಂದು ಅವಳ ಶೋಷಣೆ ನಡೆಯುತ್ತಲಿದೆ, ಅತ್ಯಾಚಾರ, ಮಾನಭಂಗ, ವಧುದಹನ ಹೆಚ್ಚುತ್ತಲಿರುವುದು ಒಂದು ವಿಪರ್ಯಾಸವಲ್ಲವೆ ?

ಬದಲಾವಣೆ ಜೀವಂತಿಕೆಯ ಲಕ್ಷಣ; ಬೆಳವಣಿಗೆಯ ಸಂಕೇತ. ಹೊಸ ವಿಚಾರಗಳು, ಹೊಸದೃಷ್ಟಿಕೋನ; ವೈಜ್ಞಾನಿಕ ವಿಶ್ಲೇಷಣೆಗಳಿಂದಾಗಿ ವಿಚಾರ ಕ್ರಾಂತಿಯಾಗುತ್ತಿರುವುದು ಮೆಚ್ಚಲೇಬೇಕು. ಗತವೈಭವದ ನೆರಳಿನಲ್ಲೇ ಬದುಕುವುದರಲ್ಲಿ ಅರ್ಥವಿಲ್ಲವೆಂಬುದೂ ಸರ್ವವಿದಿತ. ಈ ಹೊಸ ಅಲೆಯ ಪ್ರವಾಹ ನಮ್ಮ ಮೌಢ್ಯ, ಅಂಧಶ್ರದ್ಧೆಯನ್ನು ದೂರಮಾಡಿ ಬುದ್ಧಿಯವಿಕಾಸಕ್ಕೆ ನಾಂದಿಯಾದರೆ ಅದು ಸ್ವಾಗತಾರ್ಹ. ಇಂತಹ ಬೆಳವಣಿಗೆಯಲ್ಲಿ ಇತರರ ಸಂಸ್ಕೃತಿಯಲ್ಲಿನ ಒಳ್ಳೆಯ ಅಂಶಗಳನ್ನು ನಮ್ಮದಾಗಿಸಿಕೊಂಡರೇನೂ ತಪ್ಪಿಲ್ಲ ಮಹಾನ್ ನಾಟಕಕಾರ ಶೇಕ್ಸ್‌ಪಿಯರ ತನ್ನ ನಾಟಕಗಳ ಕಥಾವಸ್ತುವನ್ನು ಬೇರೆ ಬೇರೆ ಮೂಲಗಳಿಂದ ಆಯ್ದುಕೊಂಡು ಬರೆಯುತ್ತಿದ್ದನು. ಆದರೆ ನಾಟಕ ಸಿದ್ಧವಾದಾಗ ಅದಕ್ಕೆ ತನ್ನದೇ ಆದ ಹೊಸರೂಪ ಕೊಟ್ಟಿರುತ್ತಿದ್ದನು. ಎಂತಲೇ ಒಬ್ಬ ವಿಮರ್ಶಕ 'What was theft in others, was a triumph for him, ಎಂದ ತನ್ನ ಮೆಚ್ಚುಗೆ ವ್ಯಕ್ತಪಡಿಸಿದ್ದಾನೆ. ನಮ್ಮ ಅನುಕರಣೆ ಕೂಡಾ ಇಂಥಾದ್ದಾಗಿರಬೇಕು; ಇತರರಿಗೆ ಮಾದರಿಯಾಗುವಂತಿರಬೇಕು; ಹೊಸಪೀಳಿಗೆಯವರಿಗೆ ಸರಿಯಾದ ಮಾರ್ಗದರ್ಶನ ನೀಡುವಂತಿರಬೇಕು. ಆದರೆ ಈಗ ನಾವು ಕಾಣುತ್ತಿರುವುದು ಕೇವಲ ಅಂಧಾನುಕರಣೆ. ಕಲೆಯ ಹೆಸರಿನಲ್ಲಿ, ಸೇವೆಯ ಹೆಸರಿನಲ್ಲಿ, ಧರ್ಮ ಮತ್ತು ಜಾತಿಯ ಹೆಸರಿನಲ್ಲಿ, ಪ್ರಗತಿಯ ಹೆಸರಿನಲ್ಲಿ, ಅನುಕರಣೆಮಾಡಿ ಆತ್ಮವಂಚನೆ ಮಾಡಿಕೊಳ್ಳುತ್ತಿದ್ದೇವೆ; ಸ್ವಂತಿಕೆ (Individuality) ಮತ್ತು ಸ್ವಾಭಿಮಾನ ಕಳೆದು ಕೊಳ್ಳುತ್ತಿದ್ದೇವೆ ಹೊಸ ವಿಚಾರದ ಅಲೆಗೆ ಸಿಕ್ಕಿ ಬಿದ್ದು ಅಂಧಾನುಕರಣೆ ಮಾಡಿದರೆ ಅದೆಂಥ ಪ್ರಗತಿಯಾದೀತು. ?

# ತನ್ನಂತೆ ಪರರು ಪರರಂತೆ ತಾನು

—ಡಾ|| ಸಂಜೀವಶೆಟ್ಟಿ, ಮುಖ್ಯಸ್ಥರು, ಕನ್ನಡ ವಿಭಾಗ, ಕೆ. ಜಿ. ಸೋಮಯ್ಯ ಕಲಾ ಮತ್ತು ವಾಣಿಜ್ಯ ಕಾಲೇಜು, ವಿದ್ಯಾವಿಹಾರ (ಪೂರ್ವ), ಮುಂಬಯಿ-400 077.

ಮಾತೃ ಭಾಷಾಭಿಮಾನ ವಿಲ್ಲದಿರುವುದು ಆತ್ಮ ವಂಚನೆಯೇ!ಸರಿ ಭಾಷಾಭಿಮಾನ ರಹಿತನಲ್ಲಿ ರಾಷ್ಟ್ರಭಕ್ತಿ, ದೇಶಪ್ರೇಮ ಇರಲು ಸಾಧ್ಯವೇ ತನ್ನ ತಾಯಿಯನ್ನು ಪ್ರೀತಿಸದವ, ಗೌರವಿಸಿದವ, ಇತರರ ತಾಯಂದಿರನ್ನು ಪ್ರೀತಿಸಬಲ್ಲನೆ? ಗೌರವಿಸ ಬಲ್ಲನೆ? 'ತನ್ನಂತೆ ಪರರು — — ಪರರಂತೆಯೇ ತಾನು .... ಎಂದು ತಿಳಿದು ಭಾಷಾಭಿಮಾನ ತೋರಿಸುವುದು ಔಚಿತ್ಯ ಪೂರ್ಣ. ಆದರೆ ತನ್ನ ತಾಯಿಯನ್ನು ದೂರಮಾಡಿ ಇತರರ ತಾಯಂದಿರು ಪ್ರಯೋಜನಕಾರಿಗಳೆಂದು ವರ್ತಿಸುವ ಕೇವಲ ಸ್ವಾರ್ಥಪರಪಥ ಎಷ್ಟು ಅಪಾರ್ಥ, ಅನರ್ಥಕಾರಿ ಎಂಬುದನ್ನು ತಿಳಿದುಕೊಂಡು, ವ್ಯಾಪಾರಿ ಬುದ್ಧಿಯನ್ನು ತ್ಯಜಿಸಿ. ಮಾತೃಭಾಷಾಭಿಮಾನವನ್ನು ಮೆರೆಯುವ ಹೃದಯ ಶ್ರೀಮಂತಿಕೆ ಸಮಗ್ರ ಕನ್ನಡಿಗರಲ್ಲಿ ರಕ್ತಗತವಾಗಿರಬೇಕು. ಇದರರ್ಥ ಬೇರೆ ಭಾಷೆಗಳನ್ನು ಕಲಿಯಬಾರದು, ಪ್ರೀತಿಸಬಾರದೆಂದರ್ಥವಲ್ಲ. ಮಾನವ ಜನಾಂಗವನ್ನು ಪ್ರೀತಿಸುವಂತೆ ಎಲ್ಲಾ ಭಾಷೆಗಳನ್ನು ಪ್ರೀತಿಯಿಂದ್ಕಲಿಯುವುದರಲ್ಲಿ ಸಾರ್ಥಕತೆಯಿದೆ ಕನ್ನಡಿಗರು ಇಂಗ್ಲೀಷ್, ಮರಾಠಿ, ಹಿಂದಿ ಮೊದಲಾದ ಹೆಚ್ಚಿನ ಎಲ್ಲಾ ಭಾಷೆಗಳನ್ನು ಕಲಿಯುತ್ತಾರೆ; ಮಾತನಾಡುತ್ತಾರೆ. ಆದರೆ ಮರಾಠಿ ಕಲಿತ ಕನ್ನಡಿಗರನ್ನು ಮರಾಠಿ ಗರೆಂದು ಭಾಷಾ ದೃಷ್ಟಿಯಿಂದ ತಿಳಿಯುವುದಿಲ್ಲ. ಹಾಗೆಯೇ ಇಂಗ್ಲೀಷ್, ಹಿಂದಿ ಕಲಿತವರನ್ನು ಕೂಡಾ; ಬದಲಿಗೆ ಕನ್ನಡಿಗರೆಂದೇ ಗುರುತಿಸುತ್ತಾರೆ. ಆದರೆ ಕನ್ನಡಿ ಗನಾಗಿದ್ದು ಅವನಿಗೆ ಕನ್ನಡವೇ ಬಾರದಿದ್ದರೆ ಅವನು ಕನ್ನಡಿಗನೆಂತು ?

ಅವನಿಗೆ ಕನ್ನಡದ ಬಗ್ಗೆ ಆದರ ಅಭಿಮಾನವಿಲ್ಲದಿದ್ದರೆ ಅವನು ಕನ್ನಡಿಗನೆಂತು? ಕನ್ನಡಿಗರ ತಾನೆಂದು ಹೇಳಿಕೊಳ್ಳಲು ನಿರಾಕರಿಸುವವನು ಕನ್ನಡಿಗನೆಂತು ? ಹೀಗೆ ಅನೇಕ ಪ್ರಶ್ನೆಗಳು ಉದ್ಭವಿಸಿ ಉತ್ತರವಿಲ್ಲದೆ ಅಸ್ತಿತ್ವವೇ ಕಳಕೊಂಡಂತಾಗುವುದಿಲ್ಲವೆ?

ನೂರಾರು ವರ್ಷಗಳಿಂದ ಕರ್ನಾಟಕದಲ್ಲಿ ಇತರ ಪ್ರದೇಶಗಳಲ್ಲಿ ನೆಲಸಿರುವ ಗುಜರಾಥಿಗಳು, ತಮಿಳರು, ಮರಾಠಿಗರು, ಪಂಜಾಬಿಗಳು ಇನ್ನಿತರ ಭಾಷಿಕರು ತಂತಮ್ಮ ಮಾತೃಭಾಷೆಯನ್ನು ಆದರಾಭಿಮಾನದಿಂದ ನೆಚ್ಚಿಕೊಂಡಿರುವಾಗ ಕನ್ನಡಿ ಗರೇಕೆ ಆದ್ರೀತಿಯಲ್ಲಿ ವರ್ತಿಸುವುದಿಲ್ಲ? ಕರ್ನಾಟಕದಲ್ಲಿ ಕನ್ನಡಿಗರೇ ಕನ್ನಡದ "ಏಕಸ್ವಾಮ್ಯದ ಬಗ್ಗೆ ಇನ್ನೂ ಮೀನಮೇಷವೆಂಬಂತೆ ವರ್ತಿಸಿದರೆ ಬೇಲಿಯೇ ಹೊಲ ಮೇಯ್ದಂತಾಗುವುದಿಲ್ಲವೇ? ಕನ್ನಡಿಗರಲ್ಲೇಕೆ ಕನ್ನಡದ ಬಗ್ಗೆ ನಿರುತ್ಸಾಹ, ನಿರ್ಮೋಹ ಕತೆ ಎಂಬುದರತ್ತ ತೆರೆದ ಮನಸ್ಸಿನಿಂದ ಚಿಂತನೆ ನಡೆಸಬೇಕಾದುದು ಕನ್ನಡಿಗರ ಆದ್ಯ

ಕರ್ತವ್ಯವಾಗಿದೆ. ಇತರ ಭಾಷಿಕರ ಭಾಷಾಭಿಮಾನದ ಕೆಚ್ಚು, ಭಾಷಾನಿಷ್ಠೆ, ಮಾತೃ ಭಾಷೆಯ ಬಗ್ಗೆ ಇರುವ ಆತ್ಮೀಯ ಕಳಕಳಿ ಕನ್ನಡಿಗರಲ್ಲೂ ಉಂಟಾಗಿ ಕನ್ನಡ ಕರ್ನಾಟಕದಲ್ಲೆಲ್ಲಾ ನಾಡುನುಡಿ ಜನರೊಡನೆಯಾಗಿ ಸದಾ ಮನದ ಮಾತಾಗಿರುವಂತೆ ಪ್ರಯತ್ನಿಸಿ ಕನ್ನಡಾಭಿಮಾನದಿಂದ ಬಾಳುವಂತೆ ಪ್ರಯತ್ನ ಶೀಲರಾಗಬೇಕು.

ಕನ್ನಡ ವಾತಾವರಣವಿಲ್ಲದ ಮನೆ, ಪರಿಸರ, ಇಂಗ್ಲಿಷ್ ವ್ಯಾಮೋಹ, ಕೇವಲ ಇಂಗ್ಲಿಷ್ ಶಿಕ್ಷಣದಿಂದಲೇ ಉನ್ನತಿ, ಪ್ರಗತಿ, ಸಿದ್ಧಿಜ್ಞಾನಸಾಧನೆ, ಘನತೆ, ಗೌರವ ಅಂತರರಾಷ್ಟ್ರೀಯ ಭಾಷಾ ಸಂಪರ್ಕ ಮತ್ತು ಉದ್ಯೋಗ ಪ್ರಾಪ್ತಿಯ ಲಾಭ,ಆಫೀಸು ಕಛೇರಿಗಳಲ್ಲಿ ಕನ್ನಡದ ಅನಾವಶ್ಯಕತೆ, ಕನ್ನಡ ಸಂಪರ್ಕ, ತಥಾ ಶಾಸನ ಭಾಷೆಯಾಗಿ ಆಡಳಿತೆಯಲ್ಲಿ ಸರ್ವತ್ರ ಮಹತ್ತರ ಸ್ಥಾನ ಹೊಂದದಿರುವಿಕೆ, ವೈದ್ಯಕೀಯ ತಾಂತ್ರಿಕ ಶಿಕ್ಷಣಗಳ ಮಾಧ್ಯಮವಾಗದಿರುವಿಕೆ, ವಿಭಿನ್ನ ಕಾರ್ಯಕಾರಣಗಳ ಪರಭಾಷೆ ವ್ಯಾಮೋಹ, ವಸ್ತುನಿಷ್ಠ ಜೀವನ ಧ್ಯೇಯ ಧೋರಣೆ, ಕರ್ನಾಟಕದಲ್ಲಿ ಕನ್ನಡ ಬಾರ ದಿದ್ದರೇನೂ ನಷ್ಟವಿಲ್ಲ, ತೊಂದರೆಯಿಲ್ಲ, ಅಗತ್ಯವಿಲ್ಲವೆಂಬ ಭಾವನೆ, ರಾಷ್ಟ್ರಭಾಷೆ ಹಿಂದಿ ಅಂತರಾಷ್ಟ್ರೀಯ ಭಾಷೆ ಇಂಗ್ಲಿಷ್ ವ್ಯವಹಾರ ಭಾಷೆಗಳೂ ಆಗಿರುವುದರಿಂದ ಕನ್ನಡ ವನ್ನೇಕೆ ಕಲಿಯಬೇಕೆಂಬ ತಾತ್ಸಾರತೆ, ಇನ್ನಿತರ ಮಾತೃಭಾಷಿಕರ ಅನಾಸಕ್ತತೆ, ಮೊದಲಾದವುಗಳು ಕನ್ನಡ ವಿಮುಖತನಕ್ಕೆ ಕಾರಣಗಳಾಗಿವೆ ಯೆಂಬುದನ್ನು ಸ್ಥೂಲ ರೀತಿಯಲ್ಲಿ ತಿಳಿದುಕೊಳ್ಳಬಹುದು. ಈ ಮೇಲಿನ ಕಾರಣಗಳ ಹಿನ್ನೆಲೆಯನ್ನರಿತು ಕೊಂಡು ಚಿಕಿತ್ಸಕ ವಿಧಿವಿಧಾನಗಳಿಂದ ಚಿಂತನೆ ನಡೆಸಿ, ಈ ತೆರನ ವಿಚಾರಗಳು ತಮ್ಮತನದ ಅಸ್ತಿತ್ವಕ್ಕೇನೇ ಕೊಡಲಿಯೇಟಾಗುತಿವೆಯೆಂಬುದರತ್ತ ತೀವ್ರ ಗಮನಹರಿಸಿ ಅರ್ಥಪೂರ್ಣವಾದ ಪರಿಹಾರಕಾರಕ ಮಾರ್ಗಗಳನ್ನು ಹುಡುಕುವುದರೊಡನೆ ಕನ್ನಡಿ ಗರಲ್ಲಿ ಕನ್ನಡಾಭಿಮಾನ ಉಳಿಸಿ, ಬೆಳೆಸುವಂತೆ ಧೀಮಂತ ಹೆಜ್ಜೆಗಳನ್ನಿಡಬೇಕಾಗಿದೆ. ಕನ್ನಡಿಗರು ನಿರ್ಲಕ್ಷ್ಯತನ, ಉದಾಸೀನ, ನಿರ್ಲಿಪ್ತತೆ, ನಿರಭಿಮಾನ ಮುಂತಾದ ದೋಷಿತ ಗುಣಗಳಿಂದ ಸುಮ್ಮನಿದ್ದರೆ ಕನ್ನಡ ವಿರೋಧಿ ವಿಷಯಗಳಿಗೆ ಅವಕಾಶಗಳನ್ನು ಮುಕ್ತವಾಗಿಸಿದರೆ ಕರ್ನಾಟದಲ್ಲಿ ಕನ್ನಡದ ಉಳಿವೇ ಪ್ರಶ್ನೆಯಾದೀತು ? ಕನ್ನಡವೇ ಕರ್ನಾಟಕದಲ್ಲಿ ಅಲ್ಪಸಂಖ್ಯಾತರ ಭಾಷೆಯಾದೀತು ? ಇದನ್ನು ಪಂಡಿತರನೇಕರು ಮೂರ್ಖತನವೆನ್ನಬಹುದು. ಆದರೆ ಪ್ರಸ್ತುತ ಪ್ರಜಾಪ್ರಭುತ್ವದ ತತ್ವಗಳಿಗನ್ವಯಿಸಿ ನಡೆಸುವ ಲೆಕ್ಕಾಚಾರ ಚುನಾವಣೆ, ಸರಕಾರಗಳು ಕೈಗೊಳ್ಳುವ ನಿರ್ಧಾರಗಳೆಲ್ಲವು ಮತದಾನದಲ್ಲಿ ಮತಗಳಿಸುವ ಏಕಮೇವ ಉದ್ದೇಶ, ಕರ್ನಾಟಕದಲ್ಲಿರುವ ವಿಭಿನ್ನ ಮಾತೃ ಭಾಷಿಕರಲ್ಲಿಯೂ ಉಂಟಾಗುತ್ತಿರುವ ಜನಜಾಗೃತಿ ಮೊದಲಾದವುಗಳನ್ನು ಗಮನಿಸಿದಾಗ ಕನ್ನಡ ಭದ್ರವಾಗಿ ರಾಜ್ಯಭಾರವಲ್ಲಿ ನೆಲೆಯೂರದಿದ್ದರೆ ಅಲ್ಪಸಂಖ್ಯಾ ತರ, ಅಲ್ಪಭಾಷಿಕರ ಕೈ ಮೇಲಾಗಿ "ಕನ್ನಡ ಎನ್ನಡಾ" ಎಂಬ ವಿಡಂಬನೆ ಇನ್ನಷ್ಟು ತೀವ್ರವಾಗಬಹುದು. ಪ್ರಸ್ತುತ ರಾಷ್ಟ್ರದಲ್ಲಿಯ ರಾಜಕೀಯ ವಿದ್ಯಾಮಾನಗಳನ್ನು ವಸ್ತುನಿಷ್ಠವಾಗಿ ಗಮನಿಸುವಾಗ ಕರ್ನಾಟಕದಲ್ಲಿ ಭಾಷಿಕ ಜನಾಂಗಿಕ ಭಿನ್ನತೆಗಳು ಕರ್ನಾಟಕದ ಏಕತೆಗೆ ಭಂಗತರುವ ಸಾಧ್ಯತೆಗಳು ಸುಲಭದಲ್ಲಿ ವಿಫಲವಾಗಲಿಕ್ಕಿಲ್ಲ ವೆಂಬ ದೂರ ದೃಷ್ಟಿ ನಮ್ಮದಾಗಿರಬೇಕು. ●

( ಸೌಜನ್ಯ : ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ ಹಂಪಿ )

ಸ್ಥಾಪನೆ : 1943

ತಂತಿ : 'ವೀರಶೈವ'

ಕೆ.ಎಸ್.ಟಿ. 73606285
ಸಿ.ಎಸ್.ಟಿ. 73656288 } ದಿ 24-8-62    ಕೇಂದ್ರ ಕಛೇರಿ : { 72866 70204

# ವೀರಶೈವ ಸಹಕಾರ ಸಂಘ, ನಿಯಮಿತ

(ಬೆಂಗಳೂರು ನಗರ ಜಿಲ್ಲಾ ಕೇಂದ್ರ ಸಹಕಾರ ಸಗಟು ಮಾರಾಟ ಮಳಿಗೆ)

ಅಪರ್ಣ ಕಾಂಪ್ಲೆಕ್ಸ್, 1 ನೇ ಮಹಡಿ, ಎಸ್. ಸಿ. ರಸ್ತೆ, ಬೆಂಗಳೂರು-560009

ವ್ಯವಹಾರ : ಸ್ವಚ್ಛ, ಗುಣಮಟ್ಟದ ದಿನನಿತ್ಯದ ಬಳಕೆ ಪದಾರ್ಥಗಳನ್ನು ಕಡಿಮೆ ದರದಲ್ಲಿ ಸಗಟು ಮಾರಾಟ ಶಾಖೆ ಮತ್ತು ಚಿಲ್ಲರೆ ಮಾರಾಟ ಶಾಖೆಗಳ ಮೂಲಕ ವಿತರಣೆ. ಗ್ರಾಹಕರ ಮನೆಗಳಿಗೆ ಸರಬರಾಜು ವ್ಯವಸ್ಥೆ ಮಾಡಲಾಗುವುದು.

1991-92 ನೇ ಸಾಲಿನಲ್ಲಿ ಷೇರು ಬಂಡವಾಳ : ಸದಸ್ಯರಿಂದ ರೂ. 4.70 ಲಕ್ಷ

ಸರ್ಕಾರದಿಂದ ರೂ. 13-42 ಲಕ್ಷ

ಒಟ್ಟು ರೂ. 18.12 ಲಕ್ಷ

1) ಸದಸ್ಯರ ಸಂಖ್ಯೆ 5803
2) ಸಗಟು ಮತ್ತು ಚಿಲ್ಲರೆ ಮಾರಾಟ : ರೂ. 1540.40 ಲಕ್ಷ
3) ಆಪದ್ಧನ : ರೂ. 11.92 ಲಕ್ಷ
4) ಇತರೆ ನಿಧಿಗಳು : ರೂ. 32.00 ಲಕ್ಷ
5) 1991-92 ರಲ್ಲಿ ನಿವ್ವಳ ಲಾಭ : ರೂ. 04.05 ಲಕ್ಷ
6) ಸದಸ್ಯರಿಗೆ ಸೌಲಭ್ಯಗಳು :

ಅ) ಕೊಳ್ಳುವ ಪದಾರ್ಥದ ಮೇಲೆ ಶೇ. 2 ರಿಯಾಯಿತಿ

ಅ) ಷೇರಿನ ಮೇಲೆ ಶೇ. 9 ರಿಯಾಯಿತಿ

ಮಾನ್ಯ ಸದಸ್ಯರು ಮತ್ತು ಗ್ರಾಹಕರ ಅನುಕೂಲಕ್ಕಾಗಿ ಬೆಂಗಳೂರು ನಗರದಲ್ಲಿ 4 ಸಗಟು ಮಾರಾಟ ಮಳಿಗೆಗಳು, 38 ಚಿಲ್ಲರೆ ಮಳಿಗೆಗಳು ಮತ್ತು ವಿಜಯನಗರದ ಬಡಾವಣೆಯಲ್ಲಿ ಒಂದು ಡಿಪಾರ್ಟ್‌ಮೆಂಟಲ್ ಸ್ಟೋರ್ಸ್.

ಕಾರ್ಯಕಾರಿ ಮಂಡಳಿಯ ಸದಸ್ಯರುಗಳು :

1) ಶ್ರೀ ಬಿ. ಎಂ. ಶ್ರೀಕಂಠಸ್ವಾಮಿಯವರು
ಅಧ್ಯಕ್ಷರು

2) ಶ್ರೀ ಜಿ. ತೋಟದಪ್ಪನವರು
ಉಪಾಧ್ಯಕ್ಷರು

–: ನಿರ್ದೇಶಕರು :–

3) ಶ್ರೀ ಬಿ. ಎಸ್. ಪರಮಶಿವಯ್ಯನವರು
4) ಶ್ರೀ ವೈ. ಟಿ. ಮಹದೇವಪ್ಪನವರು
5) ಶ್ರೀ ಬಿ. ಟಿ. ಉಮೇಶ್‌ರವರು
6) ಶ್ರೀ ಬಿ. ಬಸವರಾಜುರವರು
7) ಶ್ರೀ ಎಂ. ಶಿವಪ್ಪನವರು
8) ಶ್ರೀ ಡಿ. ಚಂದ್ರಶೇಖರಯ್ಯನವರು
9) ಶ್ರೀ ಆರ್. ನೀಲಕಂಠಯ್ಯನವರು
1) ಶ್ರೀ ಜಿ. ಶಿವಕುಮಾರ್‌ರವರು
11) ಶ್ರೀಮತಿ ಎಸ್.ಎಸ್. ಗಿರಿಜರವರು
12) ಶ್ರೀಮತಿ ಪ್ರೇಮಸೋಮಸುಂದರ್‌ರವರು
ಸರ್ಕಾರದ ಪ್ರತಿನಿಧಿ, ನಿರ್ದೇಶಕರು
13) ಶ್ರೀಮತಿ ಟಿ. ಕೆಂಪಮ್ಮನವರು M.L.C
14) ಶ್ರೀ ಡಿ. ಎಂ. ರುದ್ರಪ್ಪನವರು
15) ಶ್ರೀ ಜಿ. ಪುಟ್ಟಗಂಗಯ್ಯನವರು
16) ಉಪನಿಬಂಧಕರು ಸಹಕಾರ ಸಂಘಗಳ
ಉಪನಿಬಂಧಕರ ಕಚೇರಿ
ಬೆಂಗಳೂರು ನಗರ ಜಿಲ್ಲೆ
17) ಶ್ರೀ ಎನ್. ಡಿ. ಹನುಮಂತರಾಯಪ್ಪ
ಬಿ. ಡಿ ಸಿ. ಸಿ. ಬ್ಯಾಂಕ್
ನಿರ್ದೇಶಕರು.
18) ಕೆ. ಎನ್. ನರಸಿಂಹಸ್ವಾಮಿಯವರು
ಪ್ರಧಾನ ವ್ಯವಸ್ಥಾಪಕರು,

# ಬಸವತತ್ತ್ವ ರತ್ನಾಕರ—22
## (ವಚನ ಕಾವ್ಯಸುಧಾಸಾಗರ)

—ಶ್ರೀ ಮೋಟಗಿ ಮಲ್ಲಿಕಾರ್ಜುನ 'ಕನ್ನಡ ಕವಿ ಕಾಳಿದಾಸ', ಅಥಣಿ-591304(ಬೆಳಗಾವಿ ಜಿಲ್ಲೆ)

**ಶಿವಪದ ಪ್ರಾಪ್ತಿ : 200**

" ಜ್ಯೋತಿ ಮುಟ್ಟಲೊಡನೆ ಬತ್ತಿಯೆಲ್ಲ ಜ್ಯೋತಿಯಪ್ಪುದಯ್ಯಾ !
ಸಾಗರವ ಸೇರಲೊಡನೆ ನದಿಗಳೆಲ್ಲ ಸಾಗರವಪ್ಪುದಯ್ಯಾ !
ಲಿಂಗವ ಮುಟ್ಟಲೊಡನೆ ಅಂಗವೆಲ್ಲ ಲಿಂಗವಪ್ಪುದಯ್ಯಾ !
ಶ್ರೀಶೈಲ ಮಲ್ಲಿಕಾರ್ಜುನಾ ನಿಮ್ಮ ಸೋಂಕಿದವರೆಲ್ಲ ನಿಮ್ಮಂತಪ್ಪರಯ್ಯಾ !"

**ಪರಮಶಿವಯೋಗಿ 201**

" ಚಿನ್ನದಿಂದಲಾದ ಹಲವು ಒಡವೆಗಳ ಕರಗಿಸಿದಡೆ
ಮುನ್ನಿನ ಚಿನ್ನವೇತಾನಾದಂತೆ !
ಜಲದಿಂದಾದ ಆಣೆಕಲ್ಲು ಕರಗಿ
ಮುನ್ನಿನ ಜಲವೇ ತಾನಾದಂತೆ !
ಪರವಸ್ತುವಿನ (ಪರಶಿವನ) ಚಿತ್‌ಸ್ವರೂಪನಾದ ಶರಣನು ಆ
ಪರ ಬ್ರಹ್ಮವನೆ ಬೆರಸಿ ಪರಮ ಶಿವಯೋಗಿಯಾದನಯ್ಯಾ !
ಶ್ರೀಶೈಲ ಮಲ್ಲಿಕಾರ್ಜುನ !"

**ಮುಕ್ತಾಫಲ : 202**

"ದೇಹವೆಂಬ ಭೂಮಿಯಲ್ಲಿ ಭಕ್ತಿಯೆಂಬ ಬೀಜವಬಿತ್ತಿ,
ಕರಣದ ಕತ್ತಲೆಯೆಂಬ ಕಳೆಯ ಕಳೆದೊತ್ತೆ,
ಶಕ್ತಿಭಕ್ತಿಯನೊಳಗೊಂಡು ನಿಂದ ಮುಕ್ತಾಂಗನೆಯೆಂಬ-
ಮುಕ್ತಾಫಲ ಕೈಸಾರಿತ್ತು ನೋಡಾ !
ಶ್ರೀ ಶೈಲ ಮಲ್ಲಿಕಾರ್ಜುನ !"

**ಕೈವಲ್ಯ ಕಲ್ಪವೃಕ್ಷ : 203**

ದಿವ್ಯದೇಹಿಯ ಅನುಭವಾಮೃತ ಸಾಗರದೊಳೊಂದು
ಕಲ್ಪವೃಕ್ಷ ಕಂಗೊಳಿಸುತಿರ್ಪುದು ನೋಡಾ !
ಆ ಕಲ್ಪವೃಕ್ಷ ಅಲ್ಲಿಂದ ಸದ್ಭಕ್ತಿ—ಸುಶಾಂತಿ ರಸವನೇ

ಹೀರಿಕೊಂಡಿಪ್ಪುದು ನೋಡಾ !
ಅದಕೆ ಸದಾಚಾರ - ಸದುವಿನಯಗಳೆಂಬ
ರೆಂಬೆಗಳಿರ್ಪುವು ನೋಡಾ !

**ಪರಮಾತ್ಮ: (204)**

" ಉತ್ಪತ್ತಿಂ ಪ್ರಲಯಂ ಚೈವ-
ಭೂತಾನಾಮಾಗತಿಂ ಗತಿಮ್ ।
ವೇತ್ತಿ ವಿದ್ಯಾಮವಿದ್ಯಾಂಚಸ-
ವಾಚ್ಯೋ। ಭಗವಾನಿತಿ ॥ ಎಂದುದಾಗಿ
ಭೂತಗಳ ಉತ್ಪತ್ತಿ, ಪ್ರಲಯ, ಗತಿ, ಅಗತಿ
ವಿದ್ಯೆ ಅವಿದ್ಯೆ ಇವುಗಳನ್ನು
ಯಾವನು ಅರಿತುಕೊಂಡಿರುವನೊ ಅವನನ್ನೆ
ಭಗವಂತನೆಂದು ಕರೆಯುವರು;
ಶ್ರೀ ಶೈಲಮಲ್ಲಿಕಾರ್ಜುನ ! "

**ಆತ್ಮನೇ ಪರಮಾತ್ಮ: (205)**

" ದಿಗ್-ದೇಶ-ಕಾಲವೆ ಮೊದಲಾದ
ಭೇದಗಳಿಲ್ಲದ ಆ ಪರಬ್ರಹ್ಮವು
ಏಕವೂ ಅದ್ವಿತೀಯವೂ ಆದ ಸದ್ವಸ್ತುವಾಗಿದ್ದು
ಇದೆಲ್ಲವೂ ಆತ್ಮನೆ ಆಗಿಪ್ಪುದು ನೋಡಾ !
ಶ್ರೀ ಶೈಲ ಮಲ್ಲಿಕಾರ್ಜುನ ! "

**ಹೃದಯ ಕಮಲದೊಳಿಹ ಆತ್ಮ: (206)**

" ಓಂ। ಅಥ ಯದಿದಮಸ್ಮಿನ್ ಬ್ರಹ್ಮಪುರೆ-
ದಹರಂ ಪುಂಡರೀಕಂ ವೇಶ್ಮದಹರೋಽಸ್ಮಿ
ನ್ನಂತರಾಕಾಶ ಸ್ತಸ್ಮಿನ್ ಯದಂತಸ್ತದನ್ವೇಷ್ಟವ್ಯಂ
ತದ್ವಾವ ವಿಜಿಜ್ಞಾಸಿ ತವ್ಯಮಿತಿ॥
ಓಂ ಎಂಬೀ ಬ್ರಹ್ಮಪುರದಲ್ಲಿ ಸಣ್ಣದಾದ ಹೃದಯ-
ಪದ್ಮವೆಂಬ ನಿಲಯವಿಹುದು ನೋಡಾ!
ಅದರಲ್ಲಿ ಚಿಕ್ಕದಾದ ಒಂದು ಅಂತರಾಕಾಶವಿಹುದು ನೋಡಾ!
ಈ ಅಂತರಾಕಾಶದೊಳು ಯಾವುದಿದೆಯೊ ಅದನ್ನು

(ಆತ್ಮವನ್ನು) ಅನ್ವೇಶಿಸಬೇಕು; ಈ ಆತ್ಮರೂಪಿ
ಭಗವಂತನನ್ನು ಅರಿತುಕೊಳ್ಳಲು ಬಯಸಬೇಕು;
ಇದುವೇ ಭಕ್ತಿ ಕೇಳಾ! ಶ್ರೀ ಶೈಲ ಮಲ್ಲಿಕಾರ್ಜುನ!"

**ದೇವ ಭಾವನೆ : 207**

"ಈಶ್ವರನು ಸರ್ವಕರ್ತನು, ಸರ್ವಕಾಮನು,
ಸರ್ವಗಂಧನು, ಸರ್ವರಸನು, ಸರ್ವವ್ಯಾಪಿಯು,
ಸರ್ವೇಂದ್ರಿಯ ರಹಿತನು, ಮತ್ತು ಸಂಭ್ರಮ ವಿಹಿಸತನು ನೋಡಾ!
ಇಂತಪ್ಪ ಈಶ್ವರನೆ ಎನ್ನ ಹೃದಯ
ಪುಂಡರೀಕದಲ್ಲಿರುವ ಆತ್ಮನಾಗಿಪ್ಪನು ನೋಡಾ !
ಈ ವಿಶ್ವಂಭರನಾದ ಈಶ್ವರನೇ ಮದಿಷ್ಟಲಿಂಗವಾಗಿ
ಕರ-ಮನ-ಭಾವದೊಳು ನೆಲಸಿ ಬೆಳಗುತಿರ್ಪನು
ಕಾಣಾ, ಶ್ರೀ ಶೈಲಮಲ್ಲಿಕಾರ್ಜುನ !"

**ಧ್ಯಾನ – ಚಿಂತನೆ 208**

"ಯಾರು ಪ್ರಪಂಚದೊಳಿರ್ದೊಡು
ನೀರಿನಲ್ಲಿರ್ದ ಕಮಲದಂತೆ ನಿರ್ಲಿಪ್ತರಾಪ್ತರಾಗಿದ್ದು,
ದೇವರನ್ನು ಕುರಿತು ಸತತ ಧ್ಯಾನ-ಚಿಂತನೆ ಮಾಳ್ಪರೊ,
ಅಂತಹ ಭಕ್ತರು ಭಗವಂತನನ್ನು ಬೇಗನೆ ಕಾಣುವರು
ಯಾರು ಯಾವುದರ ಬಗೆಗೆ ಹಗಲಿರುಳು
ಭಕ್ತಿದಳೆದು ಧ್ಯಾನಾಸಕ್ತರಾಗಿರುವರೊ
ಅದೆ ತಾವಾಗುವರು ಕೇಳಾ, ಶ್ರೀ ಶೈಲ ಮಲ್ಲಿಕಾರ್ಜುನ!"

**ಸಂಸಾರ ವ್ಯಾಮೋಹ 209**

"ಯಾರು ಹೆಚ್ಚಾಗಿ ಹೊನ್ನು, ಹೆಣ್ಣು, ಮಣ್ಣುಗಳಲ್ಲಿ ಆಸಕ್ತರೊ
ಮತ್ತು ಇವುಗಳನ್ನೆ ತಮ್ಮೆಲ್ಲ ಸರ್ವಸ್ವ, ಸುಖಸಾಧನಗಳೆಂದು ತಿಳಿದಿರುವರೊ
ಅಂತಹರಲ್ಲಿ ದೇವರ ಬಗೆಗಿನ
ಆತ್ಮ ವಿಚಾರವು ಸತ್ತು ಹೋಗಿರುತ್ತದೆ.
ಕೇಳಾ, ಶ್ರೀ ಶೈಲಮಲ್ಲಿಕಾರ್ಜುನ!"

**ದೇವನಿಂದ ದೂರಾಗಿಪ್ಪ : 210**

"ಯಾರು ಈ ಭೂಮಿ, ಹೇಮ, ಕಾಮಿನಿ
ಕಾಂಚನಾದಿಗಳಿಂದ ಭಾವಭ್ರಮಿತರಾಗಿರುವರೋ
ಮತ್ತು ಮದಗಜದಂತೆ ಮದವೇರಿ ನಿಂದು
ಅದೆಷ್ಟು ಆಳವಾದ ಮಾಯಾಚಕ್ರದಲ್ಲಿ ಸಿಲುಕಿರುವರೊ,
ಅಷ್ಟೆ ಅವರಿಗೆ ಭಗವಂತನು ದೂರವಾಗಿಪ್ಪನು;
ಕಾಣಾ! ಶ್ರೀ ಶೈಲಮಲ್ಲಿಕಾರ್ಜುನ !"

(ಮುಂದುವರಿಯುತ್ತದೆ)

# ಕಬ್ಬಿಣದಿಂದ ಬಂಗಾರ

— ಬಿ. ಸುಬ್ರಾಯ ಅಡಿಗ, ನಿವೃತ್ತ ಶಿಕ್ಷಕರು, ಸಂಡೂರು ಬಳ್ಳಾರಿ ಜಿಲ್ಲೆ-583119

ಸುಮಾರು ೭ ದಶಕಗಳಷ್ಟು ಹಿಂದಿನ ಸಂಗತಿ. ನನ್ನ ತಂದೆಯ ಸೋದರತ್ತೆ ಹಲವಾರು ವರ್ಷಗಳಿಂದ ಕಾಹಿಲೆ ಬಿದ್ದಿದ್ದಳು. ತರತರದ ಔಷಧಗಳನ್ನು ಮಾಡಿದರೂ ರೋಗ ಹೆಚ್ಚುತ್ತ ಹೋಯಿತು. ಈಗ ಆದಾರಿಂದ ಚಿಕಿತ್ಸೆ ನಡೆಸಬೇಕೆಂದು ತಂದೆ ಚಿಂತೆಗೀಡಾಗಿದ್ದರು. ಆಗಲೇ ಒಂದು ದಿನ ಯಾರೋ ಒಬ್ಬರು ದರಭಂಗಾದಲ್ಲಿ ತಂಗಿರುವ ಹಕೀಮರೊಬ್ಬರ ಬಗ್ಗೆ ತಿಳಿಸಿದರು. ಅವರು ಎಂಥ ಅಸಾಧ್ಯ ರೋಗವನ್ನು ಗುಣಪಡಿಸುವರೆಂಬ ಖ್ಯಾತಿ ಹೊಂದಿದ್ದರು.

ತಂದೆ ಅವರನ್ನು ಹೋಗಿ ಕಂಡರು. ವಿಚಿತ್ರ ಪೋಶಾಕು ಅವರದು. ತಾವು ಎಲ್ಲಿಯವರೆಂದೂ ಅವರು ಹೇಳಲಿಲ್ಲ. ೧೦೦ ವರ್ಷಕ್ಕಿಂತ ಕಡಿಮೆಯವರಂತೆ ಕಾಣಿಸಲಿಲ್ಲ. ಆದರೆ ದಷ್ಟಪುಷ್ಟ ಮೈಕಟ್ಟು ಅವರ ದೀರ್ಘಾಯುಷ್ಯದ ರಹಸ್ಯವನ್ನರುಹುತ್ತಿತ್ತು. ಹಲವು ಭಾಷೆಗಳಲ್ಲಿ ಸರಾಗವಾಗಿ ಮಾತಾಡಬಲ್ಲ ಅವರು ಯಾವ ಪ್ರದೇಶದವರೆಂದೂ ಹೇಳುವಂತಿರಲಿಲ್ಲ. ಅವರು ಎಲ್ಲ ಔಷಧಗಳನ್ನು ಸ್ವತಃ ತಯಾರಿಸುತ್ತಿದ್ದರು. ಅವು ತುಂಬಾ ದುಬಾರಿಯಿದ್ದವು.

ಒಂದು ಔಷಧಿಯನ್ನು ಅವರು ನಮ್ಮ ಮನೆಯಲ್ಲಿ ಹಲವಾರು ತಿಂಗಳುಗಳಲ್ಲಿ ತಯಾರಿಸಿದರು. ೪೦೦೦ ರೂಪಾಯಿ ಖರ್ಚಾಯಿತು. ಮಾತ್ರೆಗಳವು ಒಂದು ದಿನ ಅವನ್ನು ಬಿಸಿಲಿನಲ್ಲಿ ಆರಲು ಇಟ್ಟಿದ್ದಾಗ ಆಕಸ್ಮಾತ್ ಸಾಕು ಜಿಂಕೆ ಕೆಲವು ಮಾತ್ರೆಗಳನ್ನು ನುಂಗಿತು. ಕೆಲ ನಿಮಿಷಗಳಲ್ಲೇ ಉಷ್ಣದಿಂದ ಅದೆಷ್ಟು ಒದ್ದಾಡಿತ್ತೆಂದರೆ, ಎದುರಿನ ಕೆರೆಗೆ ಹಾರಿ ಸತ್ತು ಹೋಯಿತು. ಈ ಘಟನೆಯಿಂದ ನಾವೆಲ್ಲ ತುಂಬ ಹೆದರಿದೆವು. ಪರಿಣಾಮವಾಗಿ ತಂದೆಯ ಸೋದರತ್ತೆ ಅವನ್ನು ತೆಗೆದುಕೊಳ್ಳಲೊಪ್ಪಲಿಲ್ಲ. ಈ ರೀತಿ ಎಲ್ಲ ಖರ್ಚೂ ವ್ಯರ್ಥವಾಯಿತು.

ವೈದ್ಯರು ಒಳ್ಳೇ ಚಿಕಿತ್ಸಕರಷ್ಟೇ ಅಲ್ಲ — ರಸಾಯನಶಾಸ್ತ್ರಿಗಳೂ ಆಗಿದ್ದರು. ನಾವು ತುಂಬ ಒತ್ತಾಯಿಸಿದಾಗ ಅವರು ಈ ವಿದ್ಯೆ ಪ್ರದರ್ಶಿಸಲು ಒಪ್ಪಿದರು. ಅವರು ಕಾಡಿಗೆ ಹೋಗಿ ಬೇರೆ ಬೇರೆ ಜಾತಿಯ ಕೆಲವನಸ್ಪತಿಗಳನ್ನು ಕಿತ್ತು ತಂದರು. ಬೆಂಕಿ ಹೊತ್ತಿಸಿ ದೊಡ್ಡದೊಂದು ಕಡಾಯಿಯಲ್ಲಿ ಈ ವನಸ್ಪತಿಗಳ ರಸ ಗಂಧಕ, ಪಾದರಸ ಮೊದಲಾದುವನ್ನು ಹಾಕಿದರು. ಜತೆಗೆ ಒಂದು ತುಂಡು ಕಬ್ಬಿಣವನ್ನು ಇಟ್ಟರು. ಇಡೀ ಎರಡು ವಾರಗಳವರೆಗೆ ಹಗಲಿರುಳೂ ಕುದಿಸುವ ಈ ಕಾರ್ಯ ನಡೆಯಿತು. ಬೆಂಕಿ ನಂದಲೂ ಇಲ್ಲ. ವನಸ್ಪತಿಗಳ ರಸ ಒಣಗಲೂ ಇಲ್ಲ. ೧೫ ದಿನಗಳಲ್ಲಿ ಆ ಕಬ್ಬಿಣದ ತುಂಡು ಬಂಗಾರವಾಯಿತು ! ಅದನ್ನು ಕಂಡು

ನಾವೆಲ್ಲ ದಂಗಾದೆವು. ಅಕ್ಕಸಾಲಿಗರನ್ನು ಕರೆಯಿಸಿ ಆ ತುಂಡನ್ನು ಪರೀಕ್ಷೆ ಮಾಡಿಸಲಾಯಿತು. ಅದು ಅಪ್ಪಟ ಬಂಗಾರವಾಗಿತ್ತು.

ಮಾಡುವ ವಿಧಾನವನ್ನರಿಯಲು ನಾವು ತುಂಬಾ ಪ್ರಯತ್ನಿಸಿದೆವು. ಆದರೆ ಅವರು ಹೇಳಲೇ ಇಲ್ಲ. ಅವರು ಒಂದು ಪದ್ಯವನ್ನೋದಿ ಹೇಳಿದರು. ಆದರೆ ಅದು ಪ್ರತೀಕಾತ್ಮಕ ಭಾಷೆಯಲ್ಲಿಅದದ್ದುದರಿಂದ ತಿಳಿಯಲಿಲ್ಲ.

ವೈದ್ಯರು ದರಭಂಗಾದಲ್ಲಿ ಎರಡು ವರ್ಷ ಇದ್ದರು. ಮುಂದೆ ಒಮ್ಮೆಲೇ ಕಣ್ಮರೆಯಾದರು. ಅವರಾರು ! ಎಲ್ಲಿಂದ ಬಂದಿದ್ದರು ! ಎಲ್ಲಿಗೆ ಹೋದರು ! ಇಂಥ ಅಮೂಲ್ಯ ವಿದ್ಯೆಯನ್ನರಿತೂ ಅದನ್ನು ಬೇರಾರಿಗೂ ಏಕೆ ಹೇಳಲಿಲ್ಲ ? ಎಂದು ನಾನು ಆಗಾಗ ಯೋಚಿಸುವುದುಂಟು.

## ಫ್ರಾನ್ಸಿನ ರಸಾಯನ ತಜ್ಞರು

ಫ್ರಾನ್ಸಿನ **ಕ್ಲಾಮೆಲ್ ಹಾಗೂ ಜಕೇಯರ್** ಪ್ರಸಿದ್ಧ ರಸಾಯನ ಶಾಸ್ತ್ರಿಗಳು. ಕ್ಲಾಮೆಲ್‌ನ ಬಗ್ಗೆ ಒಂದು ವದಂತಿ ಹೀಗಿದೆ — ಒಂದು ದಿನ ಆತ ರಾತ್ರಿ ನಿದ್ದೆ ಹೋದಾಗ, ಕನಸಿನಲ್ಲಿ ಒಬ್ಬಳು ಅಪ್ಸರೆ ಕಾಣಿಸಿಕೊಂಡು — 'ಕ್ಲಾಮೆಲ್, ನೋಡು ಈ ಪುಸ್ತಕವನ್ನು. ಇದನ್ನು ಯಾರೂ ಅರ್ಥೈಸಲಾರರು. ಆದರೆ ಮುಂದೊಂದು ದಿನ ಇದರ ನೆರವಿನಿಂದ ನೀನು ಅಮೂಲ್ಯ ವಸ್ತುವೊಂದನ್ನು ತಯಾರಿಸುವಿ " — ಎಂದಳು.

ಕ್ಲಾಮೆಲ್ ಪುಸ್ತಕ ತೆಗೆದುಕೊಳ್ಳಲು ಕೈಚಾಚಿದ. ಆದರೆ ಅದು ಕೈಗೆ ಸಿಗಲಿಲ್ಲ. ಪುಸ್ತಕ ಸಮೇತ ಅಪ್ಸರೆ ಮಾರೆಯಾದಳು.

ಕ್ಲಾಮೆಲ್ ಈ ಕನಸನ್ನು ಪೂರ್ತಿಮರೆತ. ಆದರೆ ಕೆಲ ಕಾಲದ ಬಳಿಕ ೧೩೫೭ರ ಒಂದು ದಿನ ಅಜ್ಞಾತ ಪುಸ್ತಕ ವ್ಯಾಪಾರಿಯೊಬ್ಬ ಅವನ ಮನೆಗೆ ಬಂದು ಒಂದು ಹಳೆಯ ಪುಸ್ತಕವನ್ನು ಮಾರಿದ. ಅದನ್ನು ಕಾಣುತ್ತಲೇ ಅವನಿಗೆ ಹಳೆಯ ಕನಸು ನೆನಪಾಯಿತು. ಕನಸಿನಲ್ಲಿ ಕಂಡಿದ್ದು ಪುಸ್ತಕವೆ! ಆಗಿತ್ತದು! ಈ ಕುರಿತು ಕ್ಲಾಮೆಲ್ ಹೀಗೆ ಬರೆದಿದ್ದಾನೆ.

ಎರಡು ಫ್ಲೋರಿನ್ (ನಾಣ್ಯ) ಕೊಟ್ಟು ನಾನದನ್ನು ಕೊಂಡೆ. ಕಾಗದದಬದಲು ಮರದ ತೊಗಟೆಯನ್ನು ಬಳಸಲಾಗಿತ್ತು. ಅದರ ಹೊದಿಕೆಯ ಮೇಲೆ ವಿಚಿತ್ರರೀತಿಯ ಅಕ್ಷರ ಹಾಗೂ ಗೆರೆಗಳನ್ನು ಬರೆಯಲಾಗಿತ್ತು. ನನಗೆ ಅದನ್ನೋದಲು ಸಾಧ್ಯವಾಗಲಿಲ್ಲ. ಬಹುಶಃ ಅವು ಯಾವುದೋ ಪುರಾತನ ಭಾಷೆಯ ಅಕ್ಷರಗಳಿರ ಬಹುದೆಂದು

ಯೋಚಿಸಿದೆ. ದೊಣ್ಣೆ, ಪರಸ್ಪರ ನುಂಗುತ್ತಿರುವ ಸರ್ಪಗಳು ಕ್ರಾಸ್, ಮರುಭೂಮಿ ಜಲಪಾತ-ಮೊದಲಾದವನ್ನು ಚಿತ್ರಸಲಾಗಿತ್ತು. ಆದರೆ ಈ ಸಂಕೇತಗಳ ಅರ್ಥವನ್ನು ಎಲ್ಲೂ ಬರೆದಿರಲಿಲ್ಲ.

ಬಹಳಷ್ಟು ಯತ್ನಿಸಿದರೂ ನಾನವನ್ನು ಅರ್ಥೈಸದಾದೆ, ಆದರೆ ಅವುಗಳಲ್ಲಿ ಬಂಗಾರ ತಯಾರಿಸುವ ರಹಸ್ಯ ಅಡಗಿರಬೇಕೆಂದು ನಾನು ಭಾವಿಸಿದೆ. ಆದರ್ಕಾಗಿಯೇ ಪುಸ್ತಕದಲ್ಲಿನ ಕೆಲವು ಗೆರೆಗಳ ಪ್ರತಿಲಿಪಿ ತೆಗೆದು ಅದನ್ನು ಅಂಗಡಿಯ ಮುಂದೆ ತೂಗುಹಾಕಿದೆ.

ಎನಸೇಲಮ್ ಎಂಬ ಚಿಕಿತ್ಸಕನಿಗೆ ರಸಾಯನ ಶಾಸ್ತ್ರದಲ್ಲಿ ಅಭಿರುಚಿಯಿತ್ತು. ಆ ಚಿತ್ರಗಳನ್ನು ನೋಡಿ, ಅವು ಯಾವುದೋ ಗ್ರಂಥದಿಂದ ತೆಗೆಯಲ್ಪಟಿವೆಯೆಂದು ಊಹಿಸಿದನವನು. ಕ್ಲಾಮೆಲ್ ಗುಟ್ಟುಬಿಡಲಿಲ್ಲ. ಇವಿಷ್ಟೇ ಸಿಕ್ಕಿದವೆಂದು ಹೇಳಿ ಅವುಗಳ ರಹಸ್ಯ ಕೇಳಿದ. ಆದರೆ ಅವನೂ ಪೂರ್ಣ ಹೇಳದೆ ಏನೇನೋ ಹೇಳಿದ. ಅವುಗಳ ಬಗ್ಗೆ ಪ್ರಯೋಗ ನಡೆಸುತ್ತ ಕ್ಲಾಮೆಲ್ ೨೧ ವರ್ಷಗಳ ತನಕ ಬಂಗಾರ ತಯಾ-ರಿಸುವ ನಿಷ್ಫಲ ಪ್ರಯತ್ನ ಮಾಡುತ್ತ ಇದ್ದ.

ನಿರಂತರದ ವಿಫಲತೆಯಿಂದ ತಾಳ್ಮೆಗೆಟ್ಟ ಕ್ಲಾಮೆಲ್‌ನಿಗೆ ಈ ಪುಸ್ತಕ ಬರೆದಾತ ಅಬ್ರಾಹಮ್ ಎಂಬ ಯಹೂದ್ಯನೆಂಬುದು ನೆನಪಾಯಿತು. ಹೀಗಾಗಿ ಯಹೂದ್ಯ ಮಾತ್ರ ಇದರ ಅರ್ಥ ಹೇಳಬಲ್ಲ ಎಂದು ಯೋಚಿಸಿ, ಆತ ಸ್ಪೈನಿಗೆ ಹೋದ. ಇಡೀ ಒಂದು ವರ್ಷ ಯಹೂದ್ಯರ ಪ್ರಾರ್ಥನಾ ಸ್ಥಳಗಳಲ್ಲಿ ಅಲೆಯುತ್ತಲಿದ್ದ. ಆದರೆ ಈ ರೇಖೆಗಳ ಅರ್ಥ ಹೇಳುವ ವ್ಯಕ್ತಿ ಸಿಗಲಿಲ್ಲ. ಕಟ್ಟಕಡೆಗೆ ಮಾತ್ರೇ ಕಾಂಶೇ ಎಂಬ ಯಹೂದಿ ಈ ವಿಚಿತ್ರ ಲಿಪಿಯ ಅರ್ಥ ಹೇಳಿದ ಆ ಅಕ್ಷರಗಳನ್ನೋದುತ್ತಲೇ "ಓ.... ಇದು ಹಿಬ್ರೂ ಭಾಷೆಯ ಮಹಾಗ್ರಂಥ. ರಾಬೀ ಅಬ್ರಾಹಮ್ ಇದನ್ನು ಬರೆದಿದ್ದ. ಇದು ಬಹುಕಾಲದಿಂದಲೂ ಅಪ್ರಾಪ್ತವಾಗಿತ್ತು."—ಎಂದನವನು.

ಮೂಲ ಪುಸ್ತಕ ಫ್ರಾನ್ಸಿನಲ್ಲಿ ಕ್ಲಾಮೆಲ್‌ನ ಬಳಿಯಿತ್ತು. ಹೀಗಾಗಿ ಕಾಂಶೇ ನನ್ನು ಫ್ರಾನ್ಸಿಗೆ ಕರೆದೊಯ್ಯಲಾಯಿತು. ಆದರೆ ಸಮುದ್ರಯಾನದ ಅಭ್ಯಾಸವಿರದ ಕಾಂಶೇ ಕಾಹಿಲೆಬಿದ್ದು ದಾರಿಯಲ್ಲೇ ಮೃತನಾದ. ನಿರಾಶನಾದ ಕ್ಲಾಮೆಲ್ ಮನೆಗೆ ಹಿಂದಿರುಗಿದ. ಕಾಂಶೇ ಹೇಳಿದ್ದ ಅರ್ಥದಂತೆ ಆ ಗ್ರಂಥವನ್ನೋದಲು ಪ್ರಯತ್ನಿಸಿದ.

ಮೂರು ವರ್ಷಗಳ ನಿರಂತರ ಪರಿಶ್ರಮದಿಂದ ಕ್ಲಾಮೆಲ್ ತನ್ನ ಪ್ರಯತ್ನದಲ್ಲಿ ಸಫಲನಾದ. ೧೭-೧-೧೩೮೨ ರಂದು ರಾತ್ರಿ ಕ್ಲಾಮೆಲ್ ಪ್ರಯೋಗ ಮಾಡುತ್ತಿದ್ದ. ಅಕಸ್ಮಾತ್ ಪೌಂಡ್ ಲೆಡ್ (ಒಂದು ಲೋಹ) ಹೊಳೆಯುವ ಬೆಳ್ಳಿಯಂತಾಯಿತು ಅದರ ಮೇಲೆ ತಾನು ಎಷ್ಟೋ ವರ್ಷಗಳಲ್ಲಿ ತಯಾರಿಸಿದ ಔಷಧವನ್ನು ಹಾಕಿದ ಕುದಿಸಿದಾಗ ಆ ಲೋಹ ವಿಧ ವಿಧದ ಬಣ್ಣಗಳನ್ನು ಹೊಂದುತ್ತ ಕಟ್ಟ ಕಡೆಗೆ ಕೆಂಬಣ್ಣದ ಗುಂಡಾಯಿತು.

ನಟ್ಟಿರುಳಿನ ನೀರವತೆಯಲ್ಲಿ ಕ್ಲಾಮೆಲ್ ಅದನ್ನು ಅರ್ಧ ಪೌಂಡ್ ಪಾದರಸದಲ್ಲಿಟ್ಟ. ಅವನ ಹೆಂಡತಿಯಲ್ಲದೆ ಬೇರಾರೂ ಜತೆಗಿರಲಿಲ್ಲ. ನೋಡನೋಡುತ್ತಿದ್ದಂತೆಯೇ ಪಾದರಸದ ಸಂಪರ್ಕ ಪಡೆದ ಆ ಗುಂಡು ಅಪ್ಪಟ ಬಂಗಾರದ್ದಾಯಿತು. ದಂಪತಿಗಳು ಆನಂದದಿಂದ ಕುಣಿದಾಡಿದರು. ಈ ರೀತಿ ಅವರ ಮಹದಾಸೆ ಈಡೇರಿತು.

ಕ್ಲಾಮೆಲ್ ಮುಂದಿನ ತನ್ನ ಜೀವಿತಾವಧಿಯಲ್ಲಿ ಅದೆಷ್ಟು ಬಂಗಾರ ತಯಾರಿಸಿದನೋ ತಿಳಿಯದು. ತಾನು ತಯಾರಿಸಿದ ಬಂಗಾರದ ನೆರವಿನಿಂದ ಆತ ೧೪ ಆಸ್ಪತ್ರೆ ಹಾಗೂ ಮೂರು ಇಗರ್ಜಿ ಕಟ್ಟಿಸಿದ್ದಲ್ಲದೆ ಹಲವಾರು ಸಂಸ್ಥೆಗಳಿಗೆ ಸಾಕಷ್ಟು ಆರ್ಥಿಕ ಸಹಾಯವನ್ನು ಸಲ್ಲಿಸಿದ

ಬಂಗಾರಕ್ಕೆ ಸಂಬಂಧಿಸಿದ ಹೆಚ್ಚಿನ ಗ್ರಂಥಗಳಲ್ಲಿ ಸರ್ಪದ ಉಲ್ಲೇಕ ಬರುತ್ತದೆ. ಆದರೆ ವಾಸ್ತವವಾಗಿ ಅದು ಯಾವ ವಸ್ತುವೆಂದು ಯಾರು ಬಹಿರಂಗ ಪಡಿಸಿಲ್ಲ.

ಬಂಗಾರ ತಯಾರಿಸುವ ವಿಧಾನಗಳು ಚಿತ್ರಗಳಲ್ಲಿರಲಿ — ಶಬ್ದಗಳಲ್ಲಿರಲಿ— ತುಂಬ ರಹಸ್ಯಮಯ. ಅವುಗಳ ಅರ್ಥವನ್ನು ಕಾಂಶೇಯಂತಹ ರಸಾಯನ ಶಾಸ್ತ್ರಜ್ಞರೇ ಸರಿಯಾಗಿ ತಿಳಿಸಬಲ್ಲರು ವಾಸ್ತವವಾಗಿ ರಸಾಯನ ಸಂಸಾರ ನಿಗೂಢವಾದುದು. ಕ್ಲಾಮೆಲ್ ಕೂಡ ಇತರರಿಗೆ ಈ ರಹಸ್ಯ ತಿಳಿಸಲಿಲ್ಲ.

('ರಾಜೇಶ್ವರ ಪ್ರಸಾದ" ರ ಲೇಖನದ ಅನುವಾದ)

# ಯಾರೂ ಕೊಳ್ಳದ ದೌರ್ಭಾಗ್ಯದ ವಜ್ರ

—ಪ. ರಾಮಕೃಷ್ಣ ಶಾಸ್ತ್ರಿ, ಶಿವಶಕ್ತಿ ನಿಲಯ, ಮಚ್ಚಿನ, ದಕ್ಷಿಣ ಕನ್ನಡ.

ಗೋಲ್ಕೊಂಡಕ್ಕೆ 250 ಕಿ.ಮೀ. ದೂರದಲ್ಲಿ ಆಂಧ್ರಪ್ರದೇಶದ ಕೃಷ್ಣಾ ಜಿಲ್ಲೆಯ ಪರ್ತಿಯಲ್ ಎಂಬ ಗ್ರಾಮವಿದೆ. ಇದರಲ್ಲಿ ವಜ್ರದ ಗಣಿಯಲ್ಲಿ ಅನೇಕ ರಾಜ್ಯಗಳಿಂದ ಬಂದ ಗುಲಾಮರ ಡೈನಾಮೆಂಟ್ ಇಟ್ಟು ವಜ್ರದ ಬಂಡೆಗಳನ್ನು ಸಿಡಿಸುತ್ತಾ ಇದ್ದರು. ಆಗ ಮಚಲೀ ಪಟ್ಟಣದ ಒಬ್ಬ ಗುಲಾಮ ಈ ಕೆಲಸ ಮಾಡುತ್ತಿದ್ದಾಗ ಎತ್ತರದಿಂದ ಭಾರೀ ವಜ್ರವೊಂದು ಅವನ ಕಾಲಿನ ಬಳಿಗೆ ಬಂದು ಬಿದ್ದಿತು. ಅಮೂಲ್ಯವಾದ ವಜ್ರವನ್ನು ನೋಡುತ್ತಲೇ ಆತನಿಗೆ ಅದರೊಂದಿಗೆ ಪರಾರಿಯಾಗಿ ಸುಖೀ ಜೀವನ ನಡೆಸುವ ಆಶೆಯುಂಟಾಯಿತು. ಆದರೆ ಸರ್ಪಗಾವಲು ನಡೆಸುತ್ತಿರುವ ಪಹರೆಯವರ ಕಣ್ಣು ತಪ್ಪಿಸಿ ಪರಾರಿಯಾಗುವುದು ಸುಲಭವಿರಲಿಲ್ಲ.

ಗುಲಾಮ ತನ್ನ ತೊಡೆಯನ್ನು ಕತ್ತಿಯಿಂದ ಸೀಳಿ ವಜ್ರವನ್ನು ಅದರೊಳಗೆ ಇರಿಸಿ ಹೊಲಿಗೆ ಹಾಕಿದ. ಗಾಯವಾದಂತೆ ಮೇಲಿನಿಂದ ಬಟ್ಟೆಕಟ್ಟಿಕೊಂಡು ಎಲ್ಲರೂ ಮಲಗಿರುವ ಸಂಧಿ ಸಾಧಿಸಿ ಗಣಿಯಿಂದ ಹೊರಗೆ ಬಂದು ಕುಂಟುತ್ತಾ ಬಂದರೆ ದೆಡೆಗೆ ಸಾಗಿದ.

ಮಹಾರಾಷ್ಟ್ರಕ್ಕೆ ಒಂದು ಹಡಗು ತೆರಳಲು ಸಿದ್ಧವಾಯಿತು ಗುಲಾಮ ಅದರಲ್ಲಿ ಪ್ರಯಾಣಿಸಲು ಅವಕಾಶ ಬೇಡಿದಾಗ ಕಪ್ತಾನ ಒಪ್ಪಲಿಲ್ಲ. ಆಗ ಆತ ತನ್ನ ತೊಡೆಯ ಸೀಳಿನಿಂದ ವಜ್ರವನ್ನು ತೆಗೆದು ತೊಳೆದು ಅವನಿಗೆ ತೋರಿಸಿದ. "ನನ್ನನ್ನು ಮುಂಬೈಗೆ ತಲುಪಿಸಿದರೆ ನಿನಗಿದನ್ನು ಇನಾಮಾಗಿ ಕೊಡುತ್ತೇನೆ. ನಾನು ಪರ್ತಿಯಲ್ ಗಣಿಯಿಂದ ಬಂದಿದ್ದೇನೆ" ಎಂದ. ಕಪ್ತಾನನ ನಾಲಗೆಯಲ್ಲಿ ನೀರೂರಿತು. ಅವನನ್ನು ಹತ್ತಿಸಿಕೊಂಡ.

ಸಮುದ್ರದ ನಡುವೆ ಕಪ್ತಾನನಿಗೆ ಒಂದು ದುರ್ಬುದ್ಧಿ ಹುಟ್ಟಿತು. ತನಗೆ ವಜ್ರ ಕೊಟ್ಟಿದ್ದೇನೆಂದು ಈ ಗುಲಾಮ ಯಾರಲ್ಲಾದರು ಉಸುರಿದರೆ ತನಗಿದು ದಕ್ಕದು ಎಂದು ಆತ ಭಾವಿಸಿ ಗುಲಾಮನನ್ನು ಬಳಿಗೆ ಕರೆದು ಅನಾಮತ್ತಾಗಿ ಸಮುದ್ರಕ್ಕೆ ಎಸೆದುಬಿಟ್ಟ.

ಮುಂಬೈ ಬಂದರದಲ್ಲಿ ಕಪ್ತಾನನಿಗೆ ಫಾರಸಿ ವ್ಯಾಪಾರಿಯೊಬ್ಬ ಭೇಟಿಯಾದ ತನ್ನ ದೇಶಕ್ಕೆ ವಜ್ರವನ್ನು ಒಯ್ಯುವ ಧೈರ್ಯ ಅವನಿಗಿರಲಿಲ್ಲ. ಆದ್ದರಿಂದ ವಜ್ರವನ್ನು 15 ಸಾವಿರ ರೂಪಾಯಿಗಳಿಗೆ ಆ ವ್ಯಾಪಾರಿಗೆ ಮಾರಾಟ ಮಾಡಿದ. ಹಣ ಕೈಗೆಬಂದ ಆನಂದ ಅತಿರೇಕಗೊಂಡು ಅವನಿಗೆ ಬುದ್ಧಿ ಭ್ರಮಣೆಯಾಯಿತು. ಅದುವರೆಗೆ ಯಾವ

ದುಶ್ಚಟವೂ ಇರದ ಅವನು ಆ ಹಣದಿಂದ ಮೋಜಿಗಾಗಿ ಕುಡಿದ. ಹೆಣ್ಣುಗಳಸಂಘ ಬಯಸಿದ. ಜೂಜಾಟದ ಕರೆಗೆ ಓಗೊಟ್ಟ. ಈ ಚಾಳಿಗಳಿಂದಾಗಿ ಉದ್ಯೋಗ ಕಳೆದುಕೊಂಡ. ಒಂದು ತಿಂಗಳೊಳಗೆ ಅವನು ಬೀದಿ ಭಿಕಾರಿಯಾಗಿ ಅಲೆದು ಕೊನೆಗೆ ಯೊರೋಪಿಗೆ ಹೋಗಿ ಸತ್ತ.

ಆದರೆ ಫಾರ್ಸಿ ವ್ಯಾಪಾರಿ ಚತುರನಾಗಿದ್ದ. ಅವನು ವಜ್ರವನ್ನು ಸಾಣೆಗೆ ಹಚ್ಚಿ ತೂಕಮಾಡಿದಾಗ 410 ಕ್ಯಾರೆಟ್ ಭಾರ ಕಾಣಿಸಿತು ಅದನ್ನು ಆತ ತನ್ನ ಹಳೆಯ ಗಿರಾಕಿಯಾದ ಮದರಾಸಿನ ಗವರ್ನರ್ ಸರ್ ಥಾಮಸ್ ಪಿಟ್‌ನ ಒಳಗೊಯ್ದ. ವಜ್ರವನ್ನು ಮೂರು ಲಕ್ಷ ರೂಪಾಯಿಗಳಿಗೆ ಕೊಳ್ಳಲು ಗವರ್ನರ್ ಒಪ್ಪಿಕೊಂಡ. ಆದರೆ ಅಷ್ಟು ಹಣ ಅವನಲ್ಲಿರದ ಕಾರಣ ಸರಕಾರಿ ಖಜಾನೆಯಲ್ಲಿದ್ದ ಹಣವನ್ನು ಅವನಿಗೆ ನೀಡಿದ. ಅವನು ವಜ್ರವನ್ನು ಖರೀದಿಸಿದ ಸಂಗತಿ ಗುಪ್ತಾಚಾರರಿಂದ ಈಸ್ಟ್ ಇಂಡಿಯಾ ಕಂಪೆನಿಗೆ ತಿಳಿದು, ಅವನಲ್ಲಿ ಅಷ್ಟು ಹಣ ಎಲ್ಲಿಂದ ಬಂದಿತು ಎಂಬ ಪ್ರಶ್ನೆಯೆದ್ದಿತು. ತನಿಖೆಗಾಗಿ ಅವನನ್ನು ಕೂಡಲೇ ಇಂಗ್ಲೆಂಡಿಗೆ ಹಾಜರಾಗುವಂತೆ ಕರೆ ಕಳುಹಿಸಲಾಯಿತು.

ಥಾಮಸ್ ವಜ್ರವನ್ನು ತೆಗೆದುಕೊಂಡು ಪತ್ನಿಯೊಂದಿಗೆ ಇಂಗ್ಲೆಂಡಿಗೆ ಹೊರಟ ದಾರಿಯಲ್ಲಿ ಅವನ ಪತ್ನಿ ಕಠಿಣ ಕಾಯಿಲೆಗೆ ತುತ್ತಾದಳು. ಚಿಕಿತ್ಸೆ ಮಾಡಲು ಹಣ-ವಿಲ್ಲದೆ ಆತ ವಜ್ರವನ್ನು ರತ್ನಪಡಿ ವ್ಯಾಪಾರಿಗೆ ಮಾರಲು ಮುಂದಾದ. ಅನೇಕ ವ್ಯಾಪಾರಿಗಳು ವಜ್ರವನ್ನು ಮೆಚ್ಚಿಕೊಂಡು ಅದಕ್ಕೆ ಪಿಟ್‌ಡೈಮಂಡ್ ಎಂದು ಹೆಸರಿಟ್ಟ ರಾದರೂ ಆತ ಹೇಳಿದ ಬೆಲೆ ತೆರಲು ಅಸಮರ್ಥರಾದರು. ಚಿಕಿತ್ಸೆ ಮಾಡಿಸಲಾಗದೆ ಪಿಟ್‌ನ ಪತ್ನಿ ತೀರಿಕೊಂಡಳು.

ಫ್ರಾನ್ಸಿನ ಲೂಯಿ ಆಗ ಅಪ್ರಾಯಸ್ಥನಾಗಿದ್ದ. ಅವನ ರೀಜೆಂಟನಾಗಿದ್ದ ಓರ್ಲಿಯನ್ಸ್‌ನ ಡ್ಯೂಕನು ಲೂಯಿಯ ಕಿರೀಟಕ್ಕಾಗಿ ವಜ್ರವನ್ನು 20 ಲಕ್ಷ ರೂಪಾಯಿಗಳಿಗೆ ಕೊಳ್ಳಲು ಮುಂದಾದ. ಖಜಾನೆಯಲ್ಲಿ ಅಷ್ಟು ಹಣವಿರದ ಕಾರಣ 6 ಕಂತುಗಳಲ್ಲಿ ಪಾವತಿಸಲು ಒಪ್ಪಂದವಾಯಿತು. ಮನೋವ್ಯಾಧಿಗೆ ತುತ್ತಾಗಿದ್ದ ಪಿಟ್ ಮೊದಲ ಕಂತಿನ ಹಣ ಕೈಗೆ ಬರುವ ಮುನ್ನವೇ ಅಸುನೀಗಿದ.

ರೀಜೆಂಟ್ ವಜ್ರವನ್ನು ಸಾಣೆ ಹಿಡಿಸಿದಾಗ ಅದರ ತೂಕ 115 ಕ್ಯಾರೆಟ್ ಗಳಿಯಿತು. "ರೀಜೆಂಟ್ ವಜ್ರ"ವೆಂದು ಖ್ಯಾತವಾದ ಅದನ್ನು 1717ರಲ್ಲಿ 14ನೆಯ ಲೂಯಿ ದೊರೆಯ ಕಿರೀಟಕ್ಕೆ ಅಳವಡಿಸಲಾಯಿತು. ಈ ಕಿರೀಟವನ್ನು ಧರಿಸಿದ ಅಲ್ಪಾವಧಿಯಲ್ಲೆ ಹಲವರು ಫ್ರೆಂಚ್ ರಾಜರು ಕೊಲೆಯಾದರು, ಅಧಿಕಾರ ಕಳೆದು ಕೊಂಡು ಅನಾಥರಾದರು.

1791ರಲ್ಲಿ ಪ್ರಜಾ ರಾಜ್ಯೋತ್ಸವದಂದು ಪ್ರದರ್ಶನಕ್ಕಿರಿಸಿದ ರೀಜೆಂಟ್ ವಜ್ರ ಕಳವಾಯಿತು. ಅಪಹರಣಕಾರನನ್ನು ಬಂಧಿಸಿ ಗಲ್ಲಿಗೇರಿಸಲಾಯಿತು. ಅದರೊಂದಿಗೆ ಫ್ರಾನ್ಸ್ ಕ್ರಾಂತಿಯ ಆಗರವಾಗಿ ರಕ್ತಪಾತಗಳಾದವು ಖಜಾನೆಯೆಲ್ಲ ಖಾಲಿಯಾಗಿ ರೀಜೆಂಟ್ ವಜ್ರ ಮಾತ್ರ ಉಳಿದಿತ್ತು. ರಾಜಪ್ರತಿನಿಧಿಗಳು ಅದನ್ನು ಡಚ್ ರಾಜನಲ್ಲಿ ಒತ್ತೆಯಿಟ್ಟರು. ನೆಪೋಲಿಯನ್ ಚಕ್ರವರ್ತಿಯಾದ ಬಳಿಕ ಹಣವನ್ನು ಸಲ್ಲಿಸಿ ವಜ್ರವನ್ನು ತಂದು ಮಡದಿ ಮರಿಯಾ ಲೂಸಿಯಳಿಗೆ ಕೊಟ್ಟ. ಅದು ಅವಳ ತಂದೆ ಆಸ್ಟ್ರಿಯಾದ ರಾಜನ ಬಳಿ ಇತ್ತು.

1814ರಲ್ಲಿ ನೆಪೋಲಿಯನ್ ದ್ವೀಪಾಂತರ ಶಿಕ್ಷೆಗೊಳಗಾದ 18ನೆಯ ಲೂಯಿ ವಜ್ರವನ್ನು ತರಲು ಡೊಡ ಎಂಬ ಸರದಾರನನ್ನು ಆಸ್ಟ್ರಿಯಾಕ್ಕೆ ಕಳುಹಿಸಿದ. ಸರದಾರನು ವಜ್ರವನ್ನೇನೋ ತಂದ. ಆದರೆ ಆಸ್ಟ್ರಿಯಾದ ದೊರೆಯೊಂದಿಗೆ ಭಾರೀ ಯುದ್ಧವಾಗುವುದನ್ನು ತಡೆಯಲು ಲೂಯಿ ವಜ್ರವನ್ನು ಮರಳಿಸಬೇಕಾಯಿತಲ್ಲದೆ ಡೊಡನನ್ನು ಕೊಲ್ಲಿಸಬೇಕಾಯಿತು. ಇದಕ್ಕಾಗಿ ವಜ್ರವು ಅವನಿಗೆ ಬಹುಮಾನವಾಗಿ ಬಂತು.

1815ರಲ್ಲಿ ನೆಪೋಲಿಯನ್ ತಪ್ಪಿಸಿಕೊಂಡು ಬಂದು ವಜ್ರವನ್ನು ಲೂಯಿ ಯಿಂದ ಕಿತ್ತುಕೊಂಡು ಕೆಂಟ್ ದ್ವೀಪಕ್ಕೆ ಪಲಾಯನ ಮಾಡಿದ. ಅವನಿಂದ ವಜ್ರ-ವನ್ನು ಮತ್ತೆ ಪಡೆದ 10ನೆಯ ಚಾರ್ಲ್ಸ್ ರಾಜನಾದ. ಅವನ ಕಾಲದಲ್ಲಿ ಕ್ರಾಂತಿ ಯಾಗಿ ಗಣರಾಜ್ಯ ಸ್ಥಾಪನೆಯಾಯಿತು. ಯಾರೂ ಕೊಳ್ಳಲು ಮುಂದೆ ಬರದ ಭಾರತದ ಈ ದೌರ್ಭಾಗ್ಯದ ವಜ್ರ ಈಗ ಫ್ರಾನ್ಸಿನ ಲೋಯರಿನ ಅಪೋಲೊ ಗ್ಯಾಲರಿಯಲ್ಲಿದೆ

# ನಾವಾಡುವ ಮಾತು ಹೇಗಿರಬೇಕು ?

ಎಚ್ ಗವಿಸಿದ್ದಯ್ಯ, ಶಿಕ್ಷಕರು, ಆವತಿ, ದೇವನಹಳ್ಳಿ ತಾ॥ ಬೆಂಗಳೂರು ಜಿ॥

**'ಮಾತು ಬೆಳ್ಳಿ, ಮೌನ ಚಿನ್ನ'** ಎನ್ನುವ ಗಾದೆಯಂತೆ ನಾವಾಡುವ ಮಾತು ಎಲ್ಲರಿಗೂ ಆಪ್ಯಾಯಮಾನವಾಗಿರಬೇಕು **ಬೆಳ್ಳಿ** ಒಂದು ಅಚ್ಚು ಮೆಚ್ಚಾಗಿರುವ ಲೋಹಹಾಗೆಯೆ ನಾವಾಡುವ ಮಾತೂ ಸಹ **ಬೆಳ್ಳಿ**ಯಂತೆ ಪ್ರಿಯವಾಗಿರಬೇಕು.

**"ರಸಿಕ ನಾಡಿದ ಮಾತು ಶಶಿ ಉದಿಸಿ ಬಂದಂತೆ"** ಎನ್ನುವ ಕವಿವಾಣಿಯೂ ಸಹ ಇಲ್ಲಿ ಸಮಂಜಸವಾಗಿ ಒಪ್ಪುತ್ತದೆ ಅಂದರೆ ನಾವಾಡುವ ಮಾತು ಸೂರ್ಯಾಸ್ತವಾದ ನಂತರ ಕತ್ತಲೆಯಲ್ಲಿ ಮುಳುಗಿದಭುವಿಗೆ ಚಂದಿರ ಹುಟ್ಟಿ ಬೆಳಕು ತಂದಂತಿರ ಬೇಕು.

**ಮಾತು ಆಡಿದರೆ ಅದರ ಬೆಲೆ ಹೋಯ್ತು; ಮುತ್ತು ಹೊಡೆದರೆ ಅದರ ಬೆಲೆ ಹಾಳಾಯ್ತು'** ಎನ್ನುವ ಮತ್ತೊಂದು ಜನಪ್ರಿಯ ಹೇಳಿಕೆಯಂತೆ ನಮ್ಮ ಪೂರ್ವಿಕರಲ್ಲಿ ಮಾತಿಗೂ ಮುತ್ತಿಗೂ ಸಂಬಂಧ ಕಲ್ಪಿಸಿದ್ದಾರೆ. ಮಾತು ಮತ್ತು ಮುತ್ತು ಒಂದು ನಾಣ್ಯದ ಎರಡು ಮುಖಗಳಿದ್ದಂತೆ. ಇವೆರಡನ್ನು ಬೇರ್ಪಡಿಸುವಂತಿಲ್ಲ, **"ಮಾತು"** ಒಂದು ಮುತ್ತಿಗೆ ಸಮಾನ. **"ಮುತ್ತು"** ಒಂದು ಮಾತಿಗೆ ಸಮಾನ. ಆದಕಾರಣ ಅಂತಹ ಶ್ರೇಷ್ಠವಾದ ಮಾತನ್ನು ಯೋಚಿಸದೆ ಬಳಸಿದರೆ, ಅದರ ಮಹತ್ವ ಹೊರಟು ಹೋಗುತ್ತದೆ; ಸುಂದರವಾದ ಮುತ್ತನ್ನು ಹೊಡೆದು ಚೂರು ಚೂರು ಮಾಡಿದಂತೆ ! ಇನ್ನು **ಮಾತು ಬಲ್ಲವನಿಗೆ ಜಗಳವಿಲ್ಲ; ಊಟ ಬಲ್ಲವನಿಗೆ ರೋಗವಿಲ್ಲ** ಎನ್ನುವ ಮತ್ತೊಂದು ನಾಣ್ಣುಡಿಯನ್ನು ನಾವಿಲ್ಲಿ ಉಲ್ಲೇಖಿಸ ಬಹುದು.

ಅತಿಯಾಗಿ ತಿಂದರೆ ಅನಾರೋಗ್ಯವಾಗುವಂತೆ; ಹಿಂದು ಮುಂದು ಯೋಚಿಸದೆ, ಮಾತನಾಡಿದರೆ ಜಗಳಕ್ಕೆ ಕಾರಣ ವಾಗುತ್ತದೆ. ಎಂದು ಅರ್ಥ ಬರುವ ಮಾತುಗಳನ್ನು ಸರಳವಾದ ಮತ್ತು ಅರ್ಥಗರ್ಭಿತವಾದ ರೀತಿಯಲ್ಲಿ ನಮ್ಮ ಹಿರಿಯರು ತಿಳಿಸಿದ್ದಾರೆ.

'Think befor you speak' ಎನ್ನುವ ಆಂಗ್ಲ ಭಾಷಾ ಹೇಳಿಕೆಯಂತೆ, ಮಾತನಾಡುವುದಕ್ಕೆ ಮೊದಲು ನಾವು ಯೋಚಿಸ ಬೇಕು. ಅಂದರೆ, ಯಾವುದೇ ಮಾತನ್ನು ಹೇಳ ಬೇಕಾದರೆ ಕ್ಷಣಕಾಲ ಆ ಮಾತಿನ ಒಳಿತು ಕೆಡಕಿನ ಬಗ್ಗೆ ಯೋಚಿಸಿ ಮಾತನಾಡುವುದು ಒಳಿತು. ಇಲ್ಲದಿದ್ದರೆ, ನಾವಾಡುವ ಆತುರದ ಮಾತುಗಳಿಂದ ಬೇರೆಯವರ ಮನಸ್ಸಿಗೆ ನೋವಾಗಬಹುದು. ಇಲ್ಲವೆ, ಆ ಮಾತುಗಳಿಂದ ನಮಗೇ ಕೆಡುಕಾಗಬಹುದು. ಮಾತು ಬಲ್ಲವನು ಮಾಣಿಕ್ಯ ತಂದ; ಎನ್ನುವ ಮತ್ತೊಂದು ಹೇಳಿಕೆಯನ್ನು ಪರಿಶೀಲಿಸೋಣ.

ಅಂದರೆ, ಒಳ್ಳೆಯ ಮತ್ತು ಹಿತವಾದ ಮಾತಾಡುವವನು ಮುತ್ತಿನಂತಹ ಬೆಲೆಬಾಳುವ ಆಭರಣವಾದ ಮಾಣಿಕ್ಯವನ್ನು ಸಹ ತರಬಲ್ಲನು" ಎಂದರ್ಥ. ಹೀಗೆ ನಾವಾಡುವ ಮಾತು, ಮುತ್ತು, ಬೆಳ್ಳಿ, ಮಾಣಿಕ್ಯ ಮುಂತಾದ ಬೆಲೆಬಾಳುವ ಆಭರಣಗಳಿಗೆ ಹೋಲಿಸಿ ಬೆಲೆ ಕಟ್ಟುತ್ತಾರೆ. ಅಂದರೆ; ನಾವು ಯೋಚಿಸಿ ಮಾತಾಡುವುದರ ಜೊತೆಗೆ ನಾವಾಡುವ ಮಾತು ಬೇರೆಯವರ ಮನಸ್ಸನ್ನು ನೋಯಿಸಬಾರದು.

ಜಗಜ್ಯೋತಿ ಬಸವಣ್ಣನವರು ನಾವಾಡುವ ಮಾತು ಮೃದುವಾಗಿದ್ದು; ಬೇರೆಯವರಿಗೆ ಹಿತವಾಗಿರಬೇಕು; ಎನ್ನುವುದಕ್ಕಾಗಿಯೇ ' **ಅಯ್ಯಾ ಎಂದರೆ ಸ್ವರ್ಗ; ಎಲವೊ ಎಂದರೆ ನರಕ; ನುಡಿದರೆ ಮುತ್ತಿನ ಹಾರದಂತಿರಬೇಕು**. ಎಂದಿದ್ದಾರೆ. ಇನ್ನು 'ಮೌನ' ಬಗ್ಗೆ ಹೇಳುವುದಾದರೆ; ಹೆಚ್ಚು ಮಾತನಾಡದೆ, ಶಾಂತಚಿತ್ತರಾಗಿರುವುದೇ 'ಮೌನ' ಎಂದು ನಾವು ಅರ್ಥೈಸಬಹುದು

'ಮಾತಿಂಗೆ ಮಾತು ನೋತುಸಾಸಿರವುಂಟು
ಮಾತಾಡದಲೆ ನಡೆದರೆ; ಕೈಲಾಸಕ್ಕಾತನೇ ಜಾಣ।

ಎಂದಿದ್ದಾನೆ. ಶ್ರೇಷ್ಠ ಕವಿ ಸರ್ವಜ್ಞ.
ಅಂದರೆ ಮಾತಿಗೆ ಮಾತು ಬೆಳೆದರೆ, ಜಗಳಕ್ಕೆ ಕಾರಣವಾಗುತ್ತದೆ. ಮಾತನಾಡದೆ ಮೌನವಹಿಸಿದರೆ। ಸ್ನೇಹವೃದ್ಧಿಯಾಗುವುದರ ಜೊತೆಗೆ ಮನಶಾಂತಿಯೂ ದೊರೆಯುತ್ತದೆ.

ಇನ್ನು 'ಬಂಗಾರ" ಒಂದು ಶ್ರೇಷ್ಠವಾದ ಆಭರಣ. ಬೆಳ್ಳಿಗಿಂತ ಅದು ಉತ್ಕೃಷ್ಟವಾದುದ್ದು ಅದಕೋಸ್ಕರವೇ ನಮ್ಮ ಪೂರ್ವಿಕರು ಮೌನವನ್ನು ಬಂಗಾರಕ್ಕೆ ಹೋಲಿಸಿರುವುದು.

ಪೋಲೋನಿಯಸ್ ತನ್ನ ಮಗನಿಗೆ ಬುದ್ಧಿ ಹೇಳುವಾಗ Give thy ear not thy tongue ಎಂದು ಹೇಳಿದ್ದಾನೆ. ಅಂದರೆ ಆತುರಾತುರದಿಂದ ಮಾತನಾಡದೆ ಮೌನದಿಂದರುವುದೇ ವಾಸಿಯಲ್ಲವೆ ?

'ಮೌನ" ಒಂದು ಆಭರಣವಿದ್ದಂತೆ. ಅಂತಹ ಆಭರಣಕ್ಕೆ ತನ್ನದೇ ಆದ ಬೆಲೆಯುಂಟು. ನಾವು ಹೆಚ್ಚು ಮಾತನಾಡುವುದರಿಂದ, ಬೇರೆಯವರು (ಇತರರು) ನಮ್ಮನ್ನು ಹಗುರವಾಗಿ ಕಾಣುತ್ತಾರೆ. ಆದ ಕಾರಣ 'ಮೌನವೇ" ಶ್ರೇಷ್ಠವಾದುದು. ಆಂಗ್ಲ ಭಾಷೆಯಲ್ಲಿ 'Silence is power' ಎನ್ನುವ ಹೇಳಿಕೆ ಜನಪ್ರಿಯವಾಗಿದೆ. ಇಲ್ಲಿ 'Silence' ಎಂದರೆ 'ಮೌನ' ಎಂದು ನಾವು ಅರ್ಥೈಸಬಹುದು. ಅಂದರೆ ಮೌನವೇ ಒಂದು ಶಕ್ತಿ. ಅದಕೋಸ್ಕರವೇ ನಮ್ಮ ಹಿರಿಯರು 'ಮಾತು" ಬೆಳ್ಳಿ, ಮೌನ ಚಿನ್ನ " ಎಂದು ಮೌನಕ್ಕೆ ಹೆಚ್ಚು 'ಒತ್ತು " ಕೊಟ್ಟಿದ್ದಾರೆ. ಆದ ಕಾರಣ ಅನಾವಶ್ಯಕವಾಗಿ ಮಾತನಾಡುವುದಕ್ಕಿಂತ ಮೌನವಾಗಿರುವುದು ಒಳ್ಳೆಯದು ಒಂದು ಪಕ್ಷ ನಾವು ಮಾತನಾಡಿದರೆ; ಆ ಮಾತು ಮುತ್ತಿನಂತಿದ್ದು; ಅದು ಇತರರಿಗೂ ಸಹ ಆಪ್ಯಾಯಮಾನವಾಗಿರಬೇಕು.

"ಮಾಟಕೂಟ" ಎಂಬ ಮಾತ ಕೇಳಲಾಗದು, ಶಿವಾ ಶಿವಾ! ನಿಮ್ಮ ಭಕ್ತರಿಗೆ "ಮಾಡಿದೆ" ನೆನ್ನದಿರೆಂದು ಶ್ರೀ ಗುರುಲಿಂಗವು ಕೃಪೆಯ ಮಾಡಿದ ಕಾರಣ, ಅಲ್ಲಿ ಮಾಡುವವರೂ ಮಾಡಿಸಿ ಕೊಂಬವರೂ ನೀವೇ ಕೂಡಲಸಂಗಮದೇವಾ.

ಹಮ್ಮಿನ ಭಕ್ತಿ ಕರ್ಮಕ್ಕೆ ಮೊದಲು, ಮರ್ಮವನರಿಯದ ಮಾಟ ಸುಯಿಧಾನದ ಕೇಡು! ಬಂದ ಸಮಯೋಚಿತವನರಿಯದಿದ್ದರೆ ನಿಂದಿರಲೊಲ್ಲ ಕೂಡಲಸಂಗಮ ದೇವಾ.

—ಶ್ರೀ ಬಸವೇಶ್ವರ

# ಹಾಸ್ಯ

—ಜಿ. ಕೃಷ್ಣರಾವ್, ನಂ. 7-5-52, 'ಗುರುಕೃಪಾ' ಜವಹರನಗರ ರಾಯಚೂರು,೫೮೪೧೦೧

ನವರಸಗಳಲ್ಲಿ ಒಂದಾದ ಹಾಸ್ಯರಸ, ಶೃಂಗಾರದ ಅನುಕರಣೆಯಿಂದ ಹುಟ್ಟು-ತ್ತದೆಂಬ ಅಭಿಪ್ರಾಯವಿದೆ. ಮನುಷ್ಯಪ್ರಾಣಿಯ ವೈಶಿಷ್ಟ್ಯವೇ ನಗು. ಹಾಸ್ಯವೇ ನಗು ನಗುವೇ ಹಾಸ್ಯವೆಂಬ ತಿಳಿವಳಿಕೆಯೊಂದಿದೆ. ಆದರೆ ಹಾಸ್ಯಬೀಜವನ್ನು ಬಿತ್ತದೆ, ನಗು ಪೈರನ್ನು ಬೆಳೆಯುವುದು ದುಸ್ಸಾಧ್ಯವಾದರೂ ಅಸಾಧ್ಯವಲ್ಲ.

ಪ್ರಸನ್ನಭಾವ, ನಿಸರ್ಗಸೌಂದರ್ಯ, ಉತ್ಸಾಹ, ಗೆಲವು. ಶ್ಲೇಷೆ ಇತ್ಯಾದಿಗಳಲ್ಲಿ ವೇಷಭೂಷಣ, ಅಲಂಕಾರ, ಮಾತಿನ ಚಮತ್ಕಾರ, ಮುದ್ರಣದೋಷ ಮುಂತಾದವು ಗಳಲ್ಲಿ ಮತ್ತು ಅಕ್ಷರ ಪಲ್ಲಟಗಳಲ್ಲಿ ತಿಳಿಯಾದ ಹಾಸ್ಯವನ್ನು ಕಂಡರೆ-ಕಟಕಿ, ಗೇಲಿ, ಲೇವಡಿ ಹಾಗು ಅವಹೇಳನದ ಮಾತುಗಳಲ್ಲಿ ಅಪಹಾಸ್ಯವನ್ನು ಕಾಣುತ್ತೇವೆ. ಹಾಸ್ಯನಕ್ಕುನಗಿಸುವದಾದರೆ, ಅಪಹಾಸ್ಯ ಚುಚ್ಚಿ ನೋಯಿಸುವದಾಗಿರುತ್ತದೆ. ವಿನೋದ ಮತ್ತು ವಿಡಂಬನೆಗಳು ಕೆಲವೊಮ್ಮೆ ನಿರ್ಮಲವಾದ ಪರಿಹಾಸ್ಯವನ್ನು ಮೂಡಿಸಲು ಸಾಧ್ಯ "ಚಿಂತನಾಮಯವಾದ ನಗುವೇ ವಿನೋದ " ಎಂದು ಜಾರ್ಜ ಮೆರಿಡಿತ್ ಹೇಳಿದರೆ, ' ಪ್ರಾಮಾಣಿಕ ಮಂದಿಯನ್ನು ನಗುವಂತೆ ಮಾಡುವುದೇ ಅಚ್ಚರಿಯ ಸಾಹಸ" ಎಂದು ಮೋಲಿಯರ್ ಹೇಳಿದ.

ಕುಮಾರವ್ಯಾಸನ ಉತ್ತರಕುಮಾರ, ಲಕ್ಷ್ಮೀಶನಚಂಡಿ, ರತ್ನಾಕರವರ್ಣಿಯ ಕುಸುಮಾಜಿಯ ತಂಗಿ, ಮುಂತಾದ ಪಾತ್ರಗಳು- ಆನಂದರ ಹೆಂಡತಿಯ ಕಾಗದ, ಕುವೆಂಪು ಅವರ " ಈಶ್ವರನೂ ನಕ್ಕಿರಬೇಕು " ಗೊರೂರು ರಾಮಸ್ವಾಮಿ ಅಯ್ಯಂ-ಗಾರರ 'ಶಿವರಾತ್ರಿ' ಮತ್ತು 'ಹಾರುವಯ್ಯಹಜಾಮನಾದ', ಶಿವರಾಮಕಾರಂತರ ' ಹಳ್ಳಿಯ ಹತ್ತು ಸಮಸ್ತರು ' ನಾ ಕಸ್ತೂರಿಯವರ "ಉಪಾಯ ವೇದಾಂತ" ಶ್ರೀರಂಗರ ಕತ್ತೆಯ ಮೀಮಾಂಸೆ ಮತ್ತು ಬೆಕ್ಕಿನ ಮೀಮಾಂಸೆ ಬೀಚಿಯವರ ತಿಂಮನತಲೆ ಎ.ಎನ್. ಮೂರ್ತಿರಾಯರ ಹಗಲುಗನಸುಗಳು ಅ.ರಾ. ಮಿತ್ರಾ ಅವರ ಯಾರೋ ಬಂದಿದ್ದರು ಮತ್ತು ಬಾಲ್ಯನಿಬಂಧುಗಳು ಮುಂತಾದ ಕತೆಗಳು, ಕೃತಿಗಳು ಹಾಗೂ ಪ್ರಬಂಧಗಳು ತಿಳಿ ಹಾಸ್ಯಕ್ಕೆ ಉತ್ತಮ ನಿದರ್ಶನಗಳಾಗಿವೆ.

ಬಹುರೂಪಿ ಚೌಡಯ್ಯ, ನಾಗಿನಾಥ, ಬಂಕಣ್ಣ, ನಗೆಮಾರಿ ತಂದೆ ಮುಂತಾದ ಶರಣರು, ಪುರಂದರದಾಸರ ಕೀರ್ತನೆಗಳು, ವಿಶೇಷವಾಗಿ ಸರ್ವಜ್ಞನ ವಚನಗಳು, ಹಾಸ್ಯರಸಕ್ಕೆ ನೀಡಿದ ಕಾಣಿಕೆ ಅಪೂರ್ವವಾದುದು.' ಕನ್ನಡ ಸಾಹಿತ್ಯದಲ್ಲಿ ಹಾಸ್ಯ' ಎಂಬ ಶ್ರೀಯುತ ಎಂ.ಎಸ್. ಸುಂಕಾಪುರವರ ಪಿ.ಎಚ್-ಡಿ. ಪ್ರಬಂಧವು ಬದುಕಿನಲ್ಲಿ ಹಾಸ್ಯದ ಮಹತ್ವಪೂರ್ಣವಾದ ಸ್ಥಾನದರಿವನ್ನುಂಟು ಮಾಡಿ ಕೊಡುತ್ತದೆ.

ತಿಳಿ ಹಾಗೂ ನಿರ್ಮಲ ಹಾಸ್ಯಕ್ಕಾಗಿ ಮುದ್ದಣ ಮನೋರಮೆಯರ ಸರಸ ಸಲ್ಲಾಪ ಜಗತ್ಪ್ರಸಿದ್ಧವಾಗಿದೆ.

'Man is the only animal that laughs and weeps', ' Laugh is the mistress of tears' , ' Smiles are languages of love' ಮುಂತಾದ ಇಂಗ್ಲಿಷ್ ಗಾದೆ ಮಾತುಗಳನ್ನು ಸ್ಮರಿಸಬಹುದು.

ಮಾತುಗಳನ್ನು ಅಕ್ಷರಶಃ ತೆಗೆದು ಕೊಳ್ಳವುದು ಭಾಷಾಂತರಕ್ಕೆ ಅಂಟಿಕೊಳ್ಳುವ ಕೆಟ್ಟ ಅಭ್ಯಾಸವಾಗಿದೆ. ಉದಾಹರಣೆಗೆ, ಸೈಕಲ್ಲಿಗೆ ಕಾಲುಬಂಡೆ, ಟಾಂಗಾಕ್ಕೆ ದ್ವಿಚಕ್ರರಥ, ನೆಕ್‌ಟೈಗೆ ಕಂಠಲಂಗೋಟ ಇತ್ಯಾದಿ. ಬೇರೆ ಭಾಷೆಯಿಂದ ತಾಯ್ನುಡಿಗೆ ತರ್ಜುಮೆ ಮಾಡುವಾಗ ಹೆಚ್ಚು ವಿಪರ್ಯಾಸವಾಗುವುದೂ ಉಂಟು. ಉದಾಹರಣೆಗೆ Cakeಗೆ ದೋಸೆಯೆಂದು, Bakeryಗೆ ರೊಟ್ಟಿ ಅಂಗಡಿಯೆಂದು ಕರೆಯುವರು. ಅದರಂತೆಯೆ ತಾಯ್ನುಡಿಯಿಂದ ಬೇರೆ ಭಾಷೆಗೆ ತರ್ಜುಮೆ ಮಾಡು-ವಾಗಲೂ ತೊಂದರೆಗಳು ಬರುವುದು ಸಹಜ. ಉದಾ. ಚಿತ್ರಾನ್ನಕ್ಕೆ Picture Rice ಮೊಸರನ್ನಕ್ಕೆ, Curds Bath ಆದ್ದರಿಂದಲೇ Translators are Traitors ಎಂಬ ಹೇಳಿಕೆಗಳು ಸಾಮಾನ್ಯವಾಗಿ ಕೇಳಿ ಬರುತ್ತವೆ. ಬಿ. ಎಂ. ಶ್ರೀಯವರು; "ಇಂಗ್ಲಿಷ್ ಗೀತಗಳು" ಪುಸ್ತಕದಲ್ಲಿ ತಮ್ಮ ಅರಿಕೆಯ ಪ್ರಥಮ ಪುಟದಲ್ಲಿಯೇ "ಭಾಷಾಂತರಕಾರರು ಕೊಲೆಗಾರರು" ಎಂದು ಪಾಶ್ಚಾತ್ಯದಲ್ಲಿ ಒಂದು ಗಾದೆಯುಂಟು ಎಂದು ಸೂಚ್ಯವಾಗಿ ಹೇಳಿ ಅದರ ವಿವರಣೆಯನ್ನು ನೀಡಿದ್ದಾರೆ. ಅನುವಾದದ ಕಲೆ-ಯನ್ನರಿಯದ ಅನುವಾದಕರನ್ನು ಕುರಿತು ಈ ಮಾತು ಹೇಳಿರಬೇಕು.

ಶ್ಲೇಷೆ, ದ್ವಂದ್ವಾರ್ಥಗಳು ಒಮ್ಮೊಮ್ಮೆ ತಿಳಿಹಾಸ್ಯ ಹಾಗು ಅಪಹಾಸ್ಯಗಳಿಗೆ ಎಡೆಮಾಡಿಕೊಡುವವು. ಪ್ರೌಢಶಾಲಾ ಶಿಕ್ಷಕರ ತರಬೇತಿಯ ಶಿಬಿರದಲ್ಲಿ ಒಬ್ಬ ಶಿಕ್ಷಕ ತಮ್ಮ ಬೋಧಕರನ್ನು ಕುರಿತು, 'ನಾವಿಲ್ಲಿಗೆ ಬಂದಿರುವುದು Data ಕಲೆಕ್ಷನ್ನಿಗಾಗಿ" ಎಂದು ಹೇಳಿದನಂತೆ. ಮೊದಲೇನೊ ಬೋಧಕರು ಬಹು ಹಿಗ್ಗಿದರು. ಶಿಕ್ಷಕರು ತಮ್ಮ ಉದ್ದಿಶ್ಯದ ಅರ್ಥವನ್ನು ಬಿಡಿಸಿ ಹೇಳಿದಾಗ (ಅಂದರೆ ಡಿ.ಎ. ಮತ್ತು ಟಿ.ಎ. ಕಲೆಕ್ಷನ್ನಿಗಾಗೆಂದು ಬೋಧಕರಿಗೆ ಅರಿವುಂಟು ಮಾಡಿಕೊಟ್ಟಾಗ) ಎಲ್ಲರೂ ನಗೆಗಡಲಲ್ಲಿ ತೇಲಾಡಿದರಂತೆ. ಒಮ್ಮೆ ಸೊಸೆ ಅತ್ತೆಗೆ, ಚೊಂಬು ಕೊಡಲೇ ? ಎಂದು ಕೇಳಿದಾಗ ಅತ್ತೆ ಕೋಪಿಸಿಕೊಂಡು, 'ಕೊಡುಮಹಾತಾಯಿ, ನೀನು ನಮ್ಮನೇಗೆ ಬಂದಿರುವುದು ನನ್ನಕೈಗೆ ಚೊಂಬು ಕೊಡಲು ತಾನೇ ! 'ಎಂದಳಂತೆ. ಆದರಂತೆಯೆ ಅಂಕಿತನಾಮಗಳು ವ್ಯಕ್ತಿಯ ಗುಣಲಕ್ಷಣ, ಸ್ವಭಾವಗಳಿಗೆ ವಿರುದ್ಧವಾದಾಗ ಹಾಸ್ಯ ಮೂಡುವದು. ಕಪ್ಪು ಮುಖದವಳಿಗೆ ಲಾವಣ್ಯ, ಮೆಳ್ಳೆಗಣ್ಣುಳ್ಳವಳಿಗೆ ಸುಲೋಚನ, ಸೊಣಕಲು

ವ್ಯಕ್ತಿಗೆ ಭೀಮಸೇನ, ನಿರ್ದಯಿಗೆ ಧರ್ಮಪ್ಪ-ಎಂದು ಕರೆಯುವ ಹೆಸರುಗಳು ಅದೆಷ್ಟು ಹಾಸ್ಯಕ್ಕೀಡುಮಾಡುವುದಿಲ್ಲ! ಮುದ್ರಣದೋಷದಿಂದಲೂ ಹಾಸ್ಯ ಉದಿಸುತ್ತದೆ. ಉದಾ. ಮಂಡನೆ-ಮುಂಡನೆ, ಅಧ್ಯಕ್ಷತೆ-ಆದಕ್ಷತೆ ಮಿತ್ರದ್ರೋಹಿ-ಮಿತದ್ರೋಹಿ, ಕೋಲು-ಕೊಲು ಎಂದಾಗುವದರಿಂದ ಸಂಪಾದಕರಿಗೆ ಸಂಕಟವಾದರೂ ಓದುಗರಿಗೆ ನಗೆ ಬರಿಸುತ್ತದೆ. ಕೆಲವರು ಚತುರೋಕ್ತಿಗಳ ಮೂಲಕ ಸಂಭಾಷಣೆಯ ಸಮಯದಲ್ಲೇ ಹಾಸ್ಯದ ಚಟಾಕಿಗಳನ್ನು ಹಾರಿಸುತ್ತಾರೆ, ಇದಕ್ಕೆ Presence of Mind ಎಂದೆನ್ನುವದು.

ಹೊತ್ತಿಗೊದವಿದ ಮಾತು ಸತ್ತವನು ಎದ್ದಂತೆ
ಹೊತ್ತಾಗಿ ನುಡಿದ ಮಾತು ಕೈಜಾರಿದಾ
ಮುತ್ತಿನಂತಿಹುದು—ಸರ್ವಜ್ಞ

ಎಂದು ಸರ್ವಜ್ಞಕವಿ ಸುಂದರವಾಗಿ ಹೇಳಿದ್ದಾನೆ. ಬೀರಬಲ್ ಮತ್ತು ತೆನಾಲಿ-ರಾಮಕೃಷ್ಣರು ಚತುರೋಕ್ತಿಗಳ ಮೂಲಕ ಎಂತಹ ಉತ್ತಮ ಹಾಸ್ಯಗಾರರಾಗಿದ್ದರೆಂಬುದನ್ನು ಚರಿತ್ರೆಯೇ ಸಾರಿಹೇಳುತ್ತದೆ.

ಹಾಸ್ಯ ಒಬ್ಬ ಮನುಷ್ಯನ ಸಂಸ್ಕೃತಿಯ ಮಟ್ಟದ ಮೇಲೆ ಒಳ್ಳೆಯ ಬೆಳಕನ್ನು ಬೀರುತ್ತದೆ. ಅವನು ನಗುವ, ನಗಿಸುವ ರೀತಿ, ಮಾತುಕತೆ ಇತ್ಯಾದಿ ಆ ವ್ಯಕ್ತಿ ಯಾವ ಮಟ್ಟದವನೆಂದು ಗುರುತಿಸಲು ಸಾಧ್ಯವಾಗುತ್ತದೆ. ಹುಸಿನಗು, ಮುಸುನಗು, ವಿಕಾರನಗು, ಕುಹಕನಗು, ವ್ಯಂಗ್ಯನಗು, ತುಂಬುನಗು-ಮುಂತಾದುವುಗಳ ಮೂಲಕ ನಾವು ವ್ಯಕ್ತಿಯ ಸ್ವಭಾವವನ್ನು, ಕೆಲಮಟ್ಟಿಗಾದರೂ ಅರಿಯಲೂ ಸಾಧ್ಯ. ರಾಮ, ಬುದ್ಧ, ಮಹಾತ್ಮಗಾಂಧಿಯವರ ಮುಖದ ಮೇಲಿನ ನಗುವಿಗೂ, ದುರ್ಯೋಧನ ದುಶ್ಯಾಸನ ಹಾಗು ಕೀಚಕನ ನಗುವಿಗೂ ಜೊತೆಗೆ ಇತ್ತೀಚಿನ ರಾಜಕಾರಣಿಗಳ ದೇಶಾವರಿ ನಗುವಿಗೂ ಇರುವ ಅಂತರವನ್ನು ಸುಲಭವಾಗಿಗುರುತಿಸಬಹುದು.

ಕನ್ನಡದ ಖ್ಯಾತ ಹಾಸ್ಯ ಬರಹಗಾರರಲ್ಲೊಬ್ಬರಾದ ಕೇಫ(ಕೇಶವಫಾರ್ಶಿ)ಅವರು ಇತ್ತೀಚೆಗೆ ಮದ್ರಾಸಿನ 'ಸಾಹಿತ್ಯಸುಧಾ"ದ ಆಶ್ರಯದಲ್ಲಿ 'ಕನ್ನಡ ಸಾಹಿತ್ಯದಲ್ಲಿ ಹಾಸ್ಯ' ಎಂಬ ವಿಷಯದ ಮೇಲೆ ಉಪನ್ಯಾಸ ನೀಡುತ್ತ, ನಗೆ ಬರಿಸುವದಷ್ಟೆ ಹಾಸ್ಯವಲ್ಲ. ಅದು ಹಾಸ್ಯದ ಒಂದು ಪ್ರಕಾರ ಮಾತ್ರ. ಹಾಸ್ಯದ ಆಳವು ಅತ್ಯಂತ ವಿಸ್ತಾರವಾಗಿದೆ. ಎಂದು ಅವರು ತಿಳಿಸಿದ್ದಾರೆ. ಟಿ. ಪಿ. ಕೈಲಾಸಂ, ಜಿ.ಪಿ.ರಾಜರತ್ನಂ. ದಾಶರಥಿ ದೀಕ್ಷಿತ್ ಮುಂತಾದವರ ವೈಶಿಷ್ಟ್ಯವನ್ನು ವಿವೇಚಿಸುತ್ತ, ಕೊರವಂಜಿ



ಧರ್ಮ–ದಾಸೋಹ ಶಿಕ್ಷಣ ಕ್ಷೇತ್ರದಲ್ಲಿ ಅದ್ಭುತ ಕ್ರಾಂತಿಯನ್ನು ಸಾಧಿಸಿ ನಾಡಿನ ಕಲ್ಯಾಣಕ್ಕಾಗಿ ಸಂಪೂರ್ಣವಾಗಿ ಸಮರ್ಪಿಸಿಕೊಂಡು "**ಕಾಯಕವೇ ಕೈಲಾಸ**" ಶರಣವಾಣಿಯನ್ನು ಕೃತಿಯಲ್ಲಿ ತೋರಿಸುತ್ತಿರುವ ತ್ರಿವಿಧ ದಾಸೋಹ ಮೂರ್ತಿಗಳಾದ ಸಿದ್ಧಗಂಗಾ ಶಿವಯೋಗಿ ಪರಮಪೂಜ್ಯ ಡಾ॥ **ಶ್ರೀ ಶ್ರೀ ಶಿವಕುಮಾರಮಹಾ** ಸ್ವಾಮಿಗಳವರ ಪೀಠಾರೋಹಣ ವಜ್ರಮಹೋತ್ಸವ ಸೇವಾಪ್ರತಿಷ್ಠಾನ ಯೋಜನೆ ರಾಷ್ಟ್ರೀಯ ಏಕತೆ ಮತ್ತು ಭಾವೈಕ್ಯತೆ ಸಾಂಕೇತಿಕವಾಗಿ 5 ಕೋಟಿ ರೂ.ಗಳ ವೆಚ್ಚ ದಲ್ಲಿ ಎರಡು ಐತಿಹಾಸಿಕ ಸ್ಮಾರಕಗಳು.



## 1. ಬೃಹತ್ ವಿದ್ಯಾರ್ಥಿ ನಿಲಯ ನಿರ್ಮಾಣ.

- ಮೂರು ಅಂತಸ್ತುಗಳ 200 ಕೊಠಡಿಗಳುಳ್ಳ ಭವ್ಯವಾದ ಸುಂದರ ಅತ್ಯಾಧುನಿಕ ಸೌಲಭ್ಯ ಹೊಂದಿರುತ್ತದೆ. ಕಟ್ಟಡದ ಹೊರ ನೋಟದ ಚಿತ್ರ ಕಾಣಬಹುದು.
- ಒಂದು ಕೊಠಡಿ ನಿರ್ಮಾಣ ವೆಚ್ಚ 35,000/–ರೂಗಳು.
- ಈ ಪುಣ್ಯ ಕಾರ್ಯದಲ್ಲಿ ಭಾಗಿಗಳಾಗುವ ದಾನಿಗಳ ಹೆಸರನ್ನು ಅಮೃತ ಶಿಲೆಯ ಫಲಕಗಳಲ್ಲಿ ಬರೆಯಲಾಗುವುದು ಎರಡೂ ಕಟ್ಟಡಗಳ ನಿರ್ಮಾಣ ಕಾರ್ಯ ಭರದಿಂದ ನಡೆಯುತ್ತಿದೆ.

(4ನೇ ರಕ್ಷಾ ಪುಟ ನೋಡಿ)



"SIDDAGANGA" MONTHLY Reg.No. KRNQ-9

ಶ್ರೀ ಸಿದ್ಧಗಂಗಾಮಠ ದಾಸೋಹಕ್ಕೆ ನಾಡಿನಲ್ಲೇ ಹೆಸರು ಮತ್ತು ಕೀರ್ತಿ ಗಳಿಸಿದೆ.

ದಾಸೋಹ ಎಲ್ಲಾ ಕಾಲಕ್ಕೂ ನಿರಂತರವಾಗಿ ನಡೆಯಬೇಕೆಂಬುದು ಶ್ರೀ ಶ್ರೀ-ಗಳವರ ಸಂಕಲ್ಪ. ಈ ಮಹಾ ಕಾರ್ಯದ ಸ್ಮರಣಾರ್ಥವಾಗಿ



## 2. ಬೃಹತ್ ಪ್ರಸಾದ ನಿಲಯ ನಿರ್ಮಾಣ.

* ಏಕ ಕಾಲದಲ್ಲಿ 3,000 ಮಂದಿ ಕುಳಿತು ಪ್ರಸಾದ ಸ್ವೀಕರಿಸುವ ವಿಶಾಲ ಭವನದ ಹೊರನೋಟದ ಚಿತ್ರ.
* 10,000/- ರೂ.ಗಳನ್ನು ನೀಡುವ ದಾನಿಗಳ ಹೆಸರನ್ನು ಅಮೃತ ಶಿಲೆಯ ಫಲಕಗಳಲ್ಲಿ ಬರೆಸಲಾಗುತ್ತದೆ.

ಮಾನವೀಯ ಸೇವಾ ಕಾರ್ಯಗಳ ಪ್ರತೀಕವಾಗಿರುವ ಶ್ರೀ ಸಿದ್ಧಗಂಗಾ ಶ್ರೀ ಶ್ರೀಗಳವರ ಪುಣ್ಯ ಸ್ಮರಣಾರ್ಹ ಸ್ಮಾರಕಗಳ ನಿರ್ಮಾಣಕ್ಕೆ ನಾಡಿನ ಭಕ್ತಾದಿಗಳು, ಹಿತೈಷಿಗಳು, ಹಳೆಯ ವಿದ್ಯಾರ್ಥಿಗಳು ಉದಾರವಾಗಿ ಕಾಣಿಕೆಯನ್ನು 5/-35000 ರೂಗಳವರೆಗೆ ಕೂಪನ್ ಕೊಳ್ಳುವುದರ ಮೂಲಕ ನೀಡಬೇಕಾಗಿ ಕೋರುತ್ತೇವೆ.

ಬಿ. ಎಸ್. ಮುದ್ದಪ್ಪ, ಐ ಎ ಎಸ್.
ಕಾರ್ಯಾಧ್ಯಕ್ಷರು,

ಎಸ್. ಎಸ್. ಹಸಬಿ, ಐ.ಪಿ.ಎಸ್.
ಕಾರ್ಯದರ್ಶಿಗಳು.

ಡಾ|| ಎಂ. ಸಿ. ಮೋದಿ, ಅಧ್ಯಕ್ಷರು,
ವಜ್ರಮಹೋತ್ಸವ ಸಮಿತಿ,
ಶ್ರೀ ಸಿದ್ಧಗಂಗಾ ಮಠ
ತುಮಕೂರು ಜಿಲ್ಲೆ-572104